# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 3 ಸಂಚಿಕೆ : 6 ಮಾರ್ಚ್ 15 ರಿಂದ 31, 1999 ಪುಟಗಳು : 24 ರೂ 5.



[ಸಂದರ್ಶನ ಲೇಖನ : ಒಳಪುಟಗಳಲ್ಲಿ]

ಹಂತ ಹಂತವಾಗಿ ಯಶಸ್ಸಿನ ಮೆಟ್ಟಿಲೇರಿದ ಅರೆಭಾಷಿಕರ ಸುಪುತ್ರ ಹಾಗೂ
ಕೊಡಗು ಜಿಲ್ಲಾ ಪಂಚಾಯ್ತಿಯ ಅಧ್ಯಕ್ಷ ಶ್ರೀ ಊರುಬೈಲು ಪುಟ್ಟಪ್ಪ ಜಯಪ್ರಕಾಶ್

ಸಂಗಾತಿ ಪತ್ರಿಕೆಯ ಓದುಗರಿಗೂ, ಜಾಹೀರಾತುದಾರರಿಗೂ ಯುಗಾದಿ ಹಬ್ಬದ ಶುಭಾಶಯಗಳು.

---

## ವಿದೇಶ ಪ್ರಯಾಣ



ಗುಡ್ಡೆಮನೆ ಕೆ. ವಿಜಯಾನಂದ [ವಿಜು], M.Sc.

[Ph. D. in Microbiology]

S/o ಗುಡ್ಡೆಮನೆ ಕುಮಾರಪ್ಪ ಮತ್ತು
ಶ್ರೀಮತಿ ಸುಶೀಲಾ ಕುಮಾರಪ್ಪನವರ ಪುತ್ರ

ಇದೇ ಮಾರ್ಚ್ 8 ರಂದು ದಕ್ಷಿಣ ಆಫ್ರಿಕಾದ ದರ್ಬನ್‌ಗೆ
ಹೆಚ್ಚಿನ ವ್ಯಾಸಂಗಕ್ಕಾಗಿ ತೆರಳಿದ ಶ್ರೀ ಗುಡ್ಡೆಮನೆ ಕೆ. ವಿಜಯಾನಂದ [ವಿಜು]ನಿಗೆ
ನಮ್ಮೆಲ್ಲರ ಶುಭ ಹಾರೈಕೆಗಳು. ಈ ಶುಭ ಗಳಿಗೆಯಲ್ಲಿ ಕುಲಗುರು
ಶ್ರೀ ವೆಂಕಟರಮಣನು ಹೆಚ್ಚಿನ ಶ್ರೇಯಸ್ಸನ್ನು ಕರುಣಿಸಲಿ ಎಂದು ಹಾರೈಸುವ

ಶ್ರೀ ಕೂಡಕಂಡಿ ಎಂ. ನಂಜುಂಡ
ಶ್ರೀಮತಿ ಕೂಡಕಂಡಿ ಎನ್. ರತ್ನ
ಕುಮಾರಿ ಕೂಡಕಂಡಿ ಎನ್. ಅನಿತಾ B.E
ಕುಮಾರ ಕೂಡಕಂಡಿ ಎನ್. ಸುದೀಪ್

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟೆಡ ಪಿ. ಶೀಲಾಮಣಿ**
ಗೌರವ ಸಂಪಾದಕ :
**ಪಟ್ಟೆಡ ಎಂ. ಪ್ರಭಾಕರ**

ಮುದ್ರಕರು :
**ಮಣ್ಣಾಂಡ್ರ ಕೆ. ತಮ್ಮಯ್ಯ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :
**ಕೊಡಗು ಸಂಗಾತಿ**
ನಂ. 35, **"ಸವಿತಾ ನಿಲಯ"**
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು–12.
ಫೋನ್ : 0821/516771

**–ಸಂಪರ್ಕಿಸುವ ವಿಳಾಸ–**

**ಮಣಿ ನಂಗಾರ್**
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ–571 201
ದೂರವಾಣಿ : 08272/29372

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 21–16 ಎಲ್.ಐ.ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ–571234

**ಅಮ್ಮಾಜೀರ ಪೊನ್ನಪ್ಪ / ಕೆಲ್ಲುಮುಟ್ಲು ಬಸಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು-04
ದೂರವಾಣಿ–080/6549669


## ಒಳನೋಟ

ಪುಟಗಳು



### ಅರೆ ಭಾಷಿಕ ವಿಭಾಗ



**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ :

## ಅರಮನೆ–ಗುರುಮನೆ

ಯಾವುದೇ ಒಬ್ಬ ವ್ಯಕ್ತಿ ಅಥವಾ ಜನಾಂಗ ಲೌಕಿಕವಾಗಿ ಹಾಗೂ ಆಧ್ಯಾತ್ಮಿಕವಾಗಿ ಮುಂದುವರಿಯಬೇಕಾದರೆ ಅರಮನೆ ಮತ್ತು ಗುರುಮನೆಯ ಆಶ್ರಯ ಬೇಕೇಬೇಕು. ಅರಮನೆಗೂ ಗುರುಮನೆಯ ಮಾರ್ಗದರ್ಶನ ಬೇಕು. ಗುರುಮನೆಗೂ ಅರಮನೆಯ ಸಹಾಯ, ಸಹಾನುಭೂತಿ ಬೇಕು. ಒಂದು ದೇಶದ ಆಡಳಿತದಲ್ಲಿ ಇವೆರಡು ಹೊಂದಿಕೊಂಡು ಹೋದರೆ ಮಾತ್ರ ಆ ದೇಶದ ಆಡಳಿತ ಸಮರ್ಪಕವಾಗಿ ನಡೆಯುತ್ತದೆ.

ಆದರೆ ಈಗ ಜಾತ್ಯಾತೀತ ಪ್ರಜಾಪ್ರಭುತ್ವದಲ್ಲಿ ಗುರುಮನೆಗೆ ಸ್ಥಾನವಿಲ್ಲದಾಗಿದೆ. ಆದರೂ ಸಹ ಜನ ಸಾಮಾನ್ಯರ ಜೀವನದಲ್ಲಿ ಗುರುಮನೆಯ ಪ್ರಾಬಲ್ಯ ಹೆಚ್ಚಾಗಿಲ್ಲದಿದ್ದರೂ ಆದೇಶವನ್ನು ಪೂರ್ತಿಯಾಗಿ ತಳ್ಳಿಹಾಕಲು ಸಾಧ್ಯವಿಲ್ಲ. ಉದಾಹರಣೆಗೆ ಯಾವ ದೇಶದಲ್ಲಿ ಕ್ರೈಸ್ತ ಧರ್ಮದ ಅನುಯಾಯಿಗಳು ರಾಜ್ಯಭಾರ ಮಾಡುತ್ತಾರೊ ಅಲ್ಲೆಲ್ಲಾ ಕ್ರೈಸ್ತ ಗುರುಗಳ ಉಪದೇಶಕ್ಕೆ ಮಾನ್ಯತೆ ಸಿಗುತ್ತದೆ. ಅದೇ ರೀತಿ ಇಸ್ಲಾಮ್ ಧರ್ಮವನ್ನು ಅನುಸರಿಸುವ ದೇಶಗಳಲ್ಲಿ ಇಸ್ಲಾಮಿ ಗುರುಗಳ ಮಾರ್ಗದರ್ಶನಕ್ಕೆ ಪ್ರಾಶಸ್ತ್ಯ ಸಿಕ್ಕೇಸಿಗುತ್ತದೆ. ಅದೇ ರೀತಿ ಬೇರೆ ಬೇರೆ ಧರ್ಮಗಳನ್ನು ಅನುಸರಿಸುವ ದೇಶಗಳ ಪ್ರಜೆಗಳ ರೀತಿಯೂ ಅದೇ ಆಗಿದೆ. ಆದರೆ ಭಾರತದಲ್ಲಿ ಮಾತ್ರ ಹಾಗಿಲ್ಲ.

ಕರ್ನಾಟಕದಲ್ಲೂ ಒಂದೊಂದು ಜಾತಿಯವರಿಗೆ ಒಂದೊಂದು ಪ್ರದೇಶಗಳಲ್ಲಿ ಜಾತಿಯ ಮಠಗಳು, ಮಠಾಧಿಶ್ವರರು ಇದ್ದಾರೆ ಉದಾ : ಲಿಂಗಾಯಿತರಿಗೆ ಹಲವಾರು ಮಠಗಳ ಮಠಾಧೀಶ್ವರರು ಆಯಾಯ ಪ್ರದೇಶದ ರಾಜಕೀಯ ಧುರೀಣರ ಮೇಲೆ ಸ್ವಲ್ಪ ಮಟ್ಟಿಗಾದರೂ ಪ್ರಭಾವವನ್ನು ಬೀರುತ್ತವೆ. ಅದೇ ರೀತಿ ಒಕ್ಕಲಿಗರ, ಬ್ರಾಹ್ಮಣರ, ಕುರುಬರ, ಶೆಟ್ಟರ ಮಠಗಳೂ, ಮಠಾಧೀಶ್ವರರು ಪ್ರಭಾವವನ್ನು ಬೀರುತ್ತಾರೆ.

ಅದೇ ರೀತಿ ದಕ್ಷಿಣ ಕನ್ನಡ ಮತ್ತು ಕೊಡಗಿನ ಗೌಡರಿಗೆ ಒಂದು ಗುರುಮನೆ ಬೇಕು. ಹಿಂದೆ ಈ ಗೌಡಂಗೆ ಶೃಂಗೇರಿಯ ಜಗದ್ಗುರುಗಳು ಗುರುಗಳಾಗಿದ್ದರು. ಆದರೆ ಈ ಮಧ್ಯೆ ಶೃಂಗೇರಿ ಜಗದ್ಗುರುಗಳ ಸಂಪರ್ಕ ಕಡಿದು ಹೋಗಿದೆ.

ಈಗೀಗ ಒಕ್ಕಲಿಗಳ ಸಂಪರ್ಕ ಹೆಚ್ಚುತ್ತಿದೆ. ಈ ಗೌಡರು ಶ್ರೀ ಆದಿ ಚುಂಚನಗಿರಿಯ ಮಠಾಧೀಶರನ್ನು ತಮ್ಮ ಗುರುವೆಂದು ಸ್ವೀಕರಿಸುತ್ತಿದ್ದಾರೆ. ಶ್ರೀ ಆದಿ ಚುಂಚನಗಿರಿಯ ಮಠಾಧೀಶರಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರೂ ಸಹ ಈ ಗೌಡರ ಕಾರ್ಯಕಲಾಪಗಳಲ್ಲಿ ಭಾಗವಹಿಸಿ ಆಶೀರ್ವಚನ ನೀಡುತ್ತಿದ್ದಾರೆ. ಇದನ್ನು ದ. ಕ. ಮತ್ತು ಕೊಡಗಿನ ಸಮಸ್ತ ಗೌಡ ಜನರು ಸೇರಿ ಒಂದು ತೀರ್ಮಾನಕ್ಕೆ ಬಂದು ತಾವು ಯಾವ ಗುರುಸ್ಥಾನಕ್ಕೆ ಸೇರಬೇಕೆಂಬುದನ್ನು ತೀರ್ಮಾನಿಸಬೇಕು. ಆ ರೀತಿ ಇಲ್ಲದೆ ಕೆಲವರು ಶ್ರೀ ಶೃಂಗೇರಿ ಜಗದ್ಗುರುಗಳು ತಮ್ಮ ಗುರುವೆಂದೂ, ಇನ್ನು ಕೆಲವರು ಶ್ರೀ ಆದಿ ಚುಂಚನಗಿರಿ ಮಠಾಧೀಶರು ತಮ್ಮ ಗುರು ಎಂದು ಸಾರಿಕೊಂಡರೆ ಸಾಮಾನ್ಯ ಜನರಿಗೆ ಈ ರೀತಿಯ ನಡಾವಳಿಕೆಯಿಂದ ಅವರ ಮನಸ್ಸಿನಲ್ಲಿ ಒಂದು ಧೃಢವಾದ ನಂಬಿಕೆ ಮೂಡುವುದಕ್ಕೆ ಸಾಧ್ಯವಿಲ್ಲದಾಗುತ್ತದೆ. ಈ ವಿಷಯದಲ್ಲಿ ಜನಾಂಗದ ಹಿರಿಯರು ಪ್ರಜ್ಞಾವಂತರು ಚಿಂತಕರಾದ ಯುವಕ ಯುವತಿಯರು ಸೇರಿ ಒಂದು ತೀರ್ಮಾನ ಕೈಗೊಳ್ಳುವುದು ಉತ್ತಮ.

ಈಗಿನ ಕಾಲದಲ್ಲಿ ಅರಮನೆಗಳು ಮಾಯವಾಗಿ ಪ್ರಜಾಪ್ರಭುತ್ವದ ವಿಧಾನ ಸೌಧಗಳು ತಲೆ ಎತ್ತಿವೆ. ಅಲ್ಲಿ ನಾನಾ ಮತದ, ಪಂಥದ, ಜಾತಿಯ ರಾಜಕೀಯ ಮುಖಂಡರುಗಳಿರುತ್ತಾರೆ ಅವರಿಗೆಲ್ಲಾ ಒಬ್ಬ ಗುರುವಿನ ಉಪದೇಶ ಸಾಧ್ಯವಾಗದು. ಅಲ್ಲಿರುವ ರಾಜಕಾರಣಿಗಳಿಗೆ ಅವರವರ ಗುರುಗಳ ಮಾರ್ಗದರ್ಶನ ಬೇಕು. ಆ ರೀತಿ ಆಗಬೇಕಾದರೆ ನಾವು ಯಾವ ಗುರುವನ್ನು ಹಿಂಬಾಲಿಸಬೇಕೆಂದು ತೀರ್ಮಾನಿಸಿ ಆ ಗುರುವಿಗೆ ನಮ್ಮ ಭಕ್ತಿಯನ್ನು ತೋರಿಸಿ ಅವರ ಆಶೀರ್ವಾದ ಪಡಕೊಂಡು ನಮ್ಮ ಆಧ್ಯಾತ್ಮಿಕ ಹಾಗೂ ಲೌಕಿಕ ಅಭಿವೃದ್ಧಿಗಳಿಗೆ ಜನಸಾಮಾನ್ಯರಿಗೆ ಸಹಾಯವಾಗುವಂತೆ ಈ ನಿಟ್ಟಿನಲ್ಲಿ ಸಂಘಟನೆಯಾಗಬೇಕಾಗಿದೆ ಎಂದು ಸಂಗಾತಿಯ ಬಯಕೆ. ○

## ಯುಗಾದಿ ಹಬ್ಬ

ಹಿಂದೂ ವರ್ಷಾರಂಭ ಯುಗಾದಿ ಹಬ್ಬಂದ. ಉಗಾದಿ ಹಬ್ಬದ ದಿನ ಮನೆನ ಶುಚಿ ಮಾಡಿ ಮಾಯಿನ ಮರದ ಎಲೆನ ತೋರಣ ಕಟ್ಟಿ ಮನೆವು ಎಲ್ಲಾ ಮಿಯ್ದ್ ಹೊಸ ಬಟ್ಟೆ ಹಾಕಂಡ್ ಸಿಹಿತಿಂಡಿ ಮಾಡಿ ದೇವರ ದೀಪ ಹಚ್ಚಿ, ಧೂಪ ಹಾಕಿ ಸ್ವಲ್ಪ ಹೊತ್ತು ಉಪವಾಸ ಇದ್ದ್ ಬೇವು ಬೆಲ್ಲ ತಿಂದ್ ಮತ್ತೆ ಎಲ್ಲವೂ ಕೂಡಿ ಬಾಳೆ ಎಲೆಲಿ ಒಟ್ಟಿಗೆ ಸಂತೋಷಂದ ಊಟ ಮಾಡುವೆ. ಬೇವು ಬೆಲ್ಲ ತಿಂಬೊದು ಹೊಸ ವರ್ಷಲಿ. ಕಹಿ ಮತ್ತೆ ಸಿಹಿ ಆ ವರ್ಷದ ಜೀವನಲಿ ಸಮ್ಮಿಶ್ರ ಆಗಿ ಬರ್ಲಿ ಹೇಳುವ ಭಾವನೆಂದ. ಬೇವು ಬೆಲ್ಲನ ತಿಂಬಕ್ಕೆ ಮುಂದೆ ಪೂಜೆ ಮಾಡಿ ಹಣ್ಣ್‌ಕಾಯಿ ಗಂಧ ಮಡ್ಗಿ ದೇವರ ಪ್ರಸಾದನ ತಕಂಡ್ ಮತ್ತೆ ಬೇವು ಬೆಲ್ಲ ತಿಂದವೆ. ಬೇವು ಬೆಲ್ಲ ತಿಂಬಕನ ಈ ಮಂತ್ರ ಹೇಳಿ ತಕಂಬದು ಒಳ್ಳೆದ್.

ಶತಾಯುರ್ವಜ್ರ ದೇಹಾಯ ಸರ್ವ ಸಂಪತ್ಕರಾಯಚ ।
ಸರ್ವಾರಿಷ್ಟ ವಿನಾಶಾಯ ನಿಂಬಕಂದಳ ಭಕ್ಷಣಂ ॥

—ತೆಕ್ಕಡ ಬಿ. ಕುಮಾರ್, ಮುತ್ತಾಮುರ್ಡಿ.

# ಕೊಡಗು ಜಿಲ್ಲಾ ಪಂಚಾಯ್ತಿಯ ನೂತನ ಅಧ್ಯಕ್ಷ ಶ್ರೀ ಊರುಬೈಲು ಪುಟ್ಟಪ್ಪ ಜಯಪ್ರಕಾಶ್

* ನಿಮ್ಮ ತಂದೆ, ತಾಯಿ ಇವರನ್ನು ಪರಿಚಯಿಸುವಿರಾ?

ಉ : ನನ್ನ ತಂದೆ ಶ್ರೀ ಯು. ಕೆ. ಪುಟ್ಟಪ್ಪನವರು. ತಾಯಿ ಪದ್ಮಾವತಿ, ಇಬ್ಬರೂ ಈಗಿಲ್ಲ.

* ನೀವು ಜನಿಸಿದ್ದು ಯಾವಾಗ ? ನಿಮ್ಮ ಊರಿನ ಬಗ್ಗೆ ತಿಳಿಸುವಿರಾ ?

ಉ : ನಾನು 18–3–1948ರಂದು ಜನಿಸಿದೆ. ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕಿನ ಸಂಪಾಜೆ ಹೋಬಳಿಯ ಚೆಂಬು ಗ್ರಾಮ. ಕನ್ನಡ ಜಿಲ್ಲೆಯ ಪರಶುರಾಮ ಸೃಷ್ಟಿಯ ಹವಾಮಾನದ ಊರಿದು.

* ನಿಮ್ಮ ವಿದ್ಯಾಭ್ಯಾಸ ಎಲ್ಲೆಲ್ಲಾಯಿತು ?

ಉ : ಪುತ್ತೂರಿನ ವೈದೆದೇವ್ಸ್‌ನ ಹೈಯರ್ ಎಲಿಮೆಂಟರಿ ಶಾಲೆಯಲ್ಲಿ ನನ್ನ ವಿದ್ಯಾಭ್ಯಾಸ ಪ್ರಾರಂಭವಾಯಿತು. 6ನೇ ತರಗತಿಯಿಂದ ಎಸ್.ಎಸ್.ಎಲ್. ಸಿ.ವರೆಗೆ ಪುತ್ತೂರಿನ ಸ್ಯೆಂಟ್ ಫಿಲೋಮಿನಾ ಶಾಲೆಯಲ್ಲಾಯ್ತು. ಮೈಸೂರಿನ ಸ್ಯೆಂಟ್ ಫಿಲೋಮಿನಾ ಕಾಲೇಜಿನಲ್ಲಿ ಪಿ.ಯು.ಸಿ. ವಿದ್ಯಾಭ್ಯಾಸ ಪಡೆದೆ. ಇಂಜಿನಿಯರಿಂಗ್ ಪದವಿಯನ್ನು ಪಿ. ಇ. ಎಸ್. ಕಾಲೇಜು, ಮಂಡ್ಯ ಇಲ್ಲಿ ಪಡೆದೆ.

ಸಂದರ್ಶನ : ಬಾಚಿಯಂಡ ಜೋಯಪ್ಪ, ಮಡೆ

* ನಿಮ್ಮ ವಿದ್ಯಾಭ್ಯಾಸ ಕಾಲದ ಚಟುವಟಿಕೆ ಬಗ್ಗೆ ತಿಳಿಸುವಿರಾ ?

ಉ : ಆಗ ನಾನೊಬ್ಬ ಒಳ್ಳೆಯ ಕ್ರೀಡಾ ಪಟುವಾಗಿ ನನ್ನನ್ನು ಗುರುತಿಸಿಕೊಂಡಿದ್ದೆ. ಜೂನಿಯರ್ ಕಾಲೇಜಿನಲ್ಲಿ ನಾನೇ ಚಾಂಪಿಯನ್. ಖೋ ಖೋ ತಂಡದ ಕ್ಯಾಪ್ಟನ್ ಆಗಿದ್ದೆ. ಇಂಜಿನಿಯರಿಂಗ್ ವಿದ್ಯಾಭ್ಯಾಸದ ಕಾಲದಲ್ಲಿ ಕಬಡ್ಡಿ ಮತ್ತು ಹಾಕಿ ತಂಡದ ಕ್ಯಾಪ್ಟನ್ ಆಗಿದ್ದೆ.

* ನಿಮ್ಮ ಇಂಜಿನಿಯರಿಂಗ್ ಪದವಿಯ ಬಳಿಕ ನಿಮ್ಮನ್ನು ಯಾವ ಕೆಲಸದಲ್ಲಿ ತೊಡಗಿಸಿಕೊಂಡಿರಿ ?

ಉ : ನೋಡಿ, ನಾನು 1972ರಲ್ಲಿ ಇಂಜಿನಿಯರಿಂಗ್ ಪದವಿ ಪಡೆದೆ. ಕೂಡಲೆ ಸಿವಿಲ್ ಕಂಟ್ರಾಕ್ಟರ್ ಆಗಿ 1974 ರವರೆಗೆ ಕೆಲಸ ಮಾಡಿದೆ ಈ ನಡುವೆ ರೈಲ್ವೆ ಇಲಾಖೆಯವರು 'ಸ್ಪೋರ್ಟ್ಸ್ ಕೋಟಾ' ಪ್ರಕಾರ ನನ್ನನ್ನು ಉದ್ಯೋಗಕ್ಕಾಗಿ ಕೈಬೀಸಿ ಕರೆದರು. ಆದರೆ ನಾನು ಆ ಉದ್ಯೋಗಕ್ಕೆ ಹೋಗಲಿಲ್ಲ.

* ನೀವು ನಿಮ್ಮ ಜೀವನದಲ್ಲಿ ನವ ತಿರುವು ಪಡೆದುದು ಯಾವಾಗ ?

ಉ : 1975ರಲ್ಲಿ ಮುಂಡೋಡಿ ಶ್ರೀಮತಿ ಲೀಲಾವತಿ ಯವರೊಡನೆ ನನ್ನ ಮದುವೆಯಾಯಿತು. ಜೀವನದ ನವ ತಿರುವು ಆರಂಭವಾಯಿತು. ನನಗೆ ಇಬ್ಬರು ಗಂಡು ಮತ್ತು ಒಬ್ಬಳು ಹೆಣ್ಣು ಮಕ್ಕಳು. ಅವರು ಉಜ್ವಲ, ಉತ್ಪಲ ಮತ್ತು ಉತ್ಪಲ.

* ನೀವು ರಾಜಕೀಯ ರಂಗವನ್ನು ಪ್ರವೇಶಿಸಿದ್ದರ ಹಿನ್ನೆಲೆ ತಿಳಿಸುವಿರಾ ?

ಉ : 1977ರ ತುರ್ತು ಪರಿಸ್ಥಿತಿಯನ್ನು ಘೋಷಿಸಿದ್ದ ಕಾಲದಲ್ಲಿ ನಾನು ರಾಜಕೀಯ ರಂಗವನ್ನು ಆ್ಯಂಟಿ ಕಾಂಗ್ರೆಸಿಗನಾಗಿ ಪ್ರವೇಶಿಸಿದೆ. ನನ್ನ ಮೇಲೆ ರಾಜಕೀಯ ಪ್ರಭಾವ ಬೀರಿದವರು ನನ್ನ ತಾಯಿ. 1978ರಲ್ಲಿ ನಡೆದ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಸಂಪಾಜೆ ಪಂಚಾಯ್ತಿಯ ಸದಸ್ಯನಾಗಿ ಆಯ್ಕೆಯಾದೆ. 1985–87ರವರೆಗೆ ಮಡಿಕೇರಿ ತಾಲ್ಲೂಕು ಪಂಚಾಯ್ತಿಯ ನಾಮಕರಣ ಸದಸ್ಯನಾದೆ. 1987–1992ರ ವರೆಗೆ ಕೊಡಗು ಜಿಲ್ಲಾ ಪರಿಷತ್ತಿನ ಸದಸ್ಯನಾದೆ. ಈ ನಡುವೆ ಅಂದರೆ 1988–90ರಲ್ಲಿ ಕೂರ್ಗ್ ಕಾಫಿ ಗ್ರೋವರ್ಸ್‌ನ ನಾಮಕರಣ ಸದಸ್ಯನಾದೆ. 1995ರಲ್ಲಿ ಕೊಡಗು ಜಿಲ್ಲಾ ಪಂಚಾಯ್ತಿಯ ಶಿಕ್ಷಣ ಮತ್ತು ಆರೋಗ್ಯಸ್ಥಾಯಿ ಸಮಿತಿಯ ಅಧ್ಯಕ್ಷನಾಗಿದ್ದೆ. ನಂತರ ಜಿಲ್ಲಾ ಪಂಚಾಯ್ತಿಯ ಸದಸ್ಯನಾಗಿ ಮುಂದುವರಿದೆ. ಈಗ ಅಂದರೆ ಡಿಸಂಬರ್ 8 ರಂದು ಕೊಡಗು ಜಿಲ್ಲಾ ಪಂಚಾಯ್ತಿಯ ಅಧ್ಯಕ್ಷನಾಗಿ ನೇಮಕಗೊಂಡು ಅಧಿಕಾರದಲ್ಲಿದ್ದೇನೆ.

* ನೀವು ಅಧ್ಯಕ್ಷರಾದ ಬಳಿಕ ಜನರು ನಿಮ್ಮೊಡನೆ ಬೆರೆಯುವುದಕ್ಕೂ ಹಿಂದೆ ಬೆರೆಯುತ್ತಿದ್ದುದಕ್ಕೂ ಏನಾದರೂ ವ್ಯತ್ಯಾಸ ಇದೆಯಾ ?

ಉ : ಹೌದು, ಬಹಳಷ್ಟು ಭಿನ್ನತೆಯನ್ನು ಗಮನಿಸಿದ್ದೇನೆ. ಜನತೆ ನನ್ನೊಡನೆ ಬೆರೆತಾಗ ನನ್ನಿಂದ ಏನನ್ನಾದರೂ ಅಪೇಕ್ಷಿಸುತ್ತಾರೆ.

[ 14ನೇ ಪುಟ ನೋಡಿ ]

# ಕೊಡಗಿನ ಫುಟ್ಬಾಲ್ ಪಂದ್ಯಾಟಕ್ಕೆ ಹೊಸ ಚೇತನ ನೀಡಿದ ಗುಡ್ಡೆಮನೆ ಅಪ್ಪಯ್ಯಗೌಡ ಸ್ಮಾರಕ ಟ್ರೋಫಿ

ದಿನಾಂಕ 28-2-1999ರಂದು ಮಡಿಕೇರಿಯ ಬ್ಲೂ ಬರ್ಡ್ ಸಾಕರ್ ವತಿಯಿಂದ ಚೊಚ್ಚಲ ಬಾರಿಗೆ ಆಯೋಜಿಸಲ್ಪಟ್ಟ ಗುಡ್ಡೆಮನೆ ಅಪ್ಪಯ್ಯಗೌಡ ಸ್ಮಾರಕ ಟ್ರೋಫಿಯನ್ನು ಮಡಿಕೇರಿಯ ಅಭಿಲಾಷ್ ತಂಡವು ತನ್ನದಾಗಿಸಿಕೊಂಡಿತು. ಈ ಪ್ರತಿಷ್ಠಿತ ಸ್ಮಾರಕ ಪ್ರಶಸ್ತಿಯನ್ನು ಕೊಡಗು ಜಿಲ್ಲಾ ಪಂಚಾಯತಿ ಅಧ್ಯಕ್ಷ ಶ್ರೀ ಊರುಬೈಲು ಜಯಪ್ರಕಾಶ್‌ರವರು ನೆರೆದ ಸಾವಿರಾರು ಕ್ರೀಡಾಭಿಮಾನಿಗಳ ಪರವಾಗಿ ನೀಡಿದರು. ಅಂಬಿಕಾ ಎಲೆಕ್ಟ್ರಾನಿಕ್ಸ್ ಮತ್ತು ಕೊಡಗು ಏಕೀಕರಣ ರಂಗದ ಪ್ರಧಾನ ಸಂಚಾಲಕ ತಮ್ಮು ಪೂವಯ್ಯ ಪಂದ್ಯವನ್ನು ಉದ್ಘಾಟಿಸಿದರೆ ಕಾರು ಮಾಲೀಕರ ಮತ್ತು ಚಾಲಕರ ಸಂಘದ ಅಧ್ಯಕ್ಷ ತಾತಪಂಡ ನಯನರವರು ಅತಿಥಿಯಾಗಿ ಆಗಮಿಸಿದ್ದರು.

ಕೊಡಗಿನ ಎಲ್ಲೆಡೆಯಿಂದಲೂ ಸುಮಾರು 32 ತಂಡಗಳು ಭಾಗವಹಿಸಿದ್ದವು. ನಾಲ್ಕು ದಿನಗಳು ನಡೆದ ಈ ಪ್ರತಿಷ್ಠಿತ ಪ್ರಶಸ್ತಿಯನ್ನು ಪ್ರಥಮಬಾರಿಗೆ ತನ್ನದಾಗಿಸಿಕೊಳ್ಳಲು ಹೆಚ್ಚಿನ ಎಲ್ಲಾ ತಂಡಗಳು ಉತ್ತಮ ಹೊಂದಾಣಿಕೆ ಹಾಗೂ ಹೋರಾಟವನ್ನು ಅಂತಿಮಕ್ಷಣದವರೆಗೂ ಇರಿಸಿಕೊಂಡು ಕಡೆಯದಾಗಿ ಉಪಾಂತ್ಯದಲ್ಲಿ ಸುಂಟಿಕೊಪ್ಪದ ಪೋಪ್‌ಕ್ಯಾತಡ್ರಲ್ ತಂಡವು ಮಡಿಕೇರಿಯ ಜಿ. ಇ. ಸಿ. ತಂಡವನ್ನು 7-6 ಗೋಲುಗಳಿಂದ ರೋಮಾಂಚಕವಾಗಿ ಸೋಲಿಸಿ ಫೈನಲ್ ಪ್ರವೇಶಿಸಿತು. ತದನಂತರ ಇನ್ನೊಂದು ಉಪಾಂತ್ಯ ಪಂದ್ಯದಲ್ಲಿ ಮಡಿಕೇರಿಯ ಸ್ಥಳೀಯ ಅಭಿಲಾಷ್ ಫ್ರೆಂಡ್ಸ್ ತಂಡವು ಮಾದಪಟ್ಟಣದ ಯಶಸ್ವಿನಿ ಎಫ್. ಸಿ. ತಂಡವನ್ನು 7-1ರಲ್ಲಿ ಬಗ್ಗು ಬಡಿದು ಫೈನಲ್ ತಲಪಿತು. ಅಂತಿಮವಾಗಿ ನಡೆದ ಫೈನಲ್‌ನಲ್ಲಿ ಪೋಪ್ ಕ್ಯಾತಡ್ರಲ್ ಮತ್ತು ಅಭಿಲಾಷ್ ತಂಡಗಳು ಸುರುವಿನಿಂದಲೇ ಚಾಕಚಕ್ಯತೆಯಿಂದಲೂ ಉತ್ತಮ ಹೊಂದಾಣಿಕೆಯಿಂದಲೂ ಸಮಬಲವಾಗಿ ಆಡಿ ಕಿಕ್ಕಿರಿದು ನೆರೆದ ಪ್ರೇಕ್ಷಕರ ಮನಸೂರೆಗೊಳ್ಳುವಲ್ಲಿ ಯಶಸ್ವಿಯಾದವು. ಪಂದ್ಯವು ಟೈಬ್ರೇಕರಿಗೆ ತಲಪಿ ಅಲ್ಲೂ 4-4ರಲ್ಲಿ ಸಮಬಲದ ತಂಡವಾಗಿ ಕೊನೆಗೆ ಸಡನ್ ಡೆತ್‌ಮೂಲಕ ಸ್ಥಳೀಯ ಅಭಿಲಾಷ್ ತಂಡವು ಪ್ರಥಮ ಬಾರಿಗೆ ಗುಡ್ಡೆಮನೆ ಅಪ್ಪಯ್ಯ ಗೌಡ ಸ್ಮಾರಕ ಟ್ರೋಫಿಯನ್ನು ತನ್ನ ಮಡಿಲಿಗೆ ಹಾಕಿಕೊಂಡಿತು.

ಫೈನಲ್ ಪಂದ್ಯಾಟದ ನಿಗದಿತ ಸಮಯದಲ್ಲಿ ಗೋಲು ಗಳಿಸಲೇಬೇಕೆನ್ನುವ ಉದ್ದೇಶದಿಂದ ಪ್ರಥಮ ಗೋಲು ಗಳಿಸುವ ಆಟಗಾರನಿಗೆ ನೀಡಿದ ಬಹುಮಾನಗಳು ಸಹ ವ್ಯರ್ಥವಾದವು. ಈ ಬಹುಮಾನ ಕೊಟ್ಟು ಪ್ರೋತ್ಸಾಹಿಸಿದವರು ಬೆಂಗಳೂರಿನ ಕಾವೇರಿನಾಡಿನ ವ್ಯವಸ್ಥಾಪಕರು ಮತ್ತು ಡಿಸ್ಕೋ ಸೌಂಡ್ಸ್ ಮಡಿಕೇರಿ ಹಾಗೂ ಸಂಪಾದಕರು, ಕೊಡಗು ಸಂಗಾತಿ ಪತ್ರಿಕೆ, ಮೈಸೂರು ಇವರುಗಳು ನೀಡಿ ಪ್ರೋತ್ಸಾಹಿಸಿದ್ದು ಪಂದ್ಯದ ವಿಶೇಷವಾಗಿತ್ತು.

ಬ್ಲೂ ಬರ್ಡ್ ಕ್ಲಬ್‌ನ ವತಿಯಿಂದ ನಡೆದ ಈ ಪ್ರಪ್ರಥಮ ಪ್ರಶಸ್ತಿಯ ಟ್ರೋಫಿ, ಅಲ್ಲದೆ ನಗದು ಬಹುಮಾನ ರೂ. 5000/- ಆಗಿದ್ದು ನಗದಿನ ಮೊತ್ತವನ್ನು ಗುಡ್ಡೆಮನೆ ಕುಟುಂಬಸ್ಥರು ಭರಿಸಿದ್ದರು. 2ನೇ ಬಹುಮಾನ ರೂ. 3000/- ಆಗಿತ್ತು. ಸಾಕರ್ ಕ್ಲಬ್‌ನ ವ್ಯವಸ್ಥಾಪಕ ಅಧ್ಯಕ್ಷ ವೆಸ್ಟರ್ನ್ ಉಡ್‌ನ ಮಾಲೀಕರು ಹಾಗೂ ಜಿಲ್ಲಾ ಕೈಗಾರಿಕೋದ್ಯಮ ಪ್ರಶಸ್ತಿ ವಿಜೇತ ಶ್ರೀ ಪಳ್ಳಿಪುರ ಭರತ್ ಇವರ ನೇತೃತ್ವದಲ್ಲಿ ಸತತವಾಗಿ 4 ದಿನಗಳು ನಡೆದವು ಈ ಸಂದರ್ಭದಲ್ಲಿ ಸಾಕರ್ ಕ್ಲಬ್‌ನ ಅಧ್ಯಕ್ಷ ಭರತ್‌ರವರು ಮಾತನಾಡಿ ಮುಂಬರುವ ದಿನಗಳಲ್ಲಿ ಕೊಡಗಿನಲ್ಲಿ ನಶಿಸುತ್ತಿರುವ ಫುಟ್ಬಾಲ್ ಕ್ರೀಡೆಗೆ ಉತ್ತೇಜನ ನೀಡಲು ತರಬೇತಿ ಶಿಬಿರ ನಡೆಸಲು ಉದ್ದೇಶಿಸಲಾಗಿದೆಯೆಂದರಲ್ಲದೆ ಯುವ ಶಕ್ತಿಯನ್ನು ಸಂಘಟಿಸಿ ರಾಷ್ಟ್ರೀಯ ಮಟ್ಟದಲ್ಲಿ ಕ್ರೀಡಾಳು ಆಗಿ ಪರಿವರ್ತಿಸುವುದು ಸಹ ಆಗಿದೆಯೆಂದರು.

1837ರ ಅಕ್ಟೋಬರ್ 31 ರಂದು ಅಂದರೆ 162 ವರ್ಷಗಳ ಹಿಂದೆ ಕೊಡಗು ಸ್ವಾತಂತ್ರ್ಯ ಬಂಡಾಯದಲ್ಲಿ ಬ್ರಿಟಿಷರು ಮತ್ತು ಅವರ ಗುಲಾಮರ ಕಪಟದಿಂದ ಗಲ್ಲಿಗೇರಿಸಲ್ಪಟ್ಟ ಹುತಾತ್ಮನ ದಿನವನ್ನು ನೆನೆಯುವುದೇ ಈ ಪಂದ್ಯಾಟದ ಉದ್ದೇಶವಾಗಿತ್ತು. ಅಪ್ಪಯ್ಯಗೌಡರ ವಂಶಜ ಗುಡ್ಡೆಮನೆ ರಮೇಶ್‌ರವರ ಅಗಾಧ ಶ್ರಮ ಮತ್ತು ಸಹಪಾಠಿಗಳ ಪ್ರೇರಣೆಯಿಂದ ಈ ಪಂದ್ಯಾಟವು ಯಶಸ್ವಿಯಾಯಿತು.

ಅಂದಿನ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಕೊಡಗು ಜಿಲ್ಲಾ ಪಂಚಾಯ್ತಿಯ ಅಧ್ಯಕ್ಷರಾದ ಶ್ರೀ ಊರುಬೈಲು ಜಯಪ್ರಕಾಶ್ ವಹಿಸಿದ್ದರು. ಮುಖ್ಯ ಅತಿಥಿಯಾಗಿ ಕುಯ್ಯಮುಡಿ ಪೂರ್ಣಯ್ಯ, ಅಧ್ಯಕ್ಷರು ಗೌಡ ವಿದ್ಯಾಸಂಘ ಮಡಿಕೇರಿ ಮತ್ತು ಮಡಿಕೇರಿಯ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲ "ಡೈನಾಮಿಕ್ ಲೇಡಿ" ಕು|| ಕೊಕ್ಕಲೇರ ರೇಖಾ ಕಾಳಯ್ಯನವರು ಆಗಮಿಸಿದ್ದರು. ರೇಖಾರವರ who is who ಎಂಬ ಪ್ರಬಂಧ ಸಂಶೋಧನೆಗಾಗಿ ವಿಶ್ವದ 10 ಮಹಿಳೆಯರಲ್ಲಿ ಇವರು

[ 14ನೇ ಪುಟ ನೋಡಿ ]

# ಕೊಡಗಿನ ಕಳೆಯನ್ನು ಕುಂದಿಸುವ ಜಾತಿ, ಬೇಧ, ಭಾವ ದೇಕೆ ?

ಭಾರತ ಒಂದು ಜನಭರಿತವಾದ ದೇಶವಾಗಿದೆ ಅದನ್ನೊಳಗೊಂಡ ಹಲವಾರು ರಾಜ್ಯಗಳು ಹಾಗೂ ಜಿಲ್ಲೆಗಳು ಸಂಪನ್ಮೂಲಗಳಿಂದ ಕೂಡಿದೆ. ಅದರಲ್ಲಿ ಎಲ್ಲರ ಮನಸೆಳೆಯುವ ಒಂದು ಸಣ್ಣ ಜಿಲ್ಲೆ ಕೊಡಗು. ಎಲ್ಲೆಲ್ಲೂ ಹಚ್ಚ ಹಸಿರಿನಿಂದ ಕಂಗೊಳಿಸುತ್ತಿರುವ ಈ ನಮ್ಮ ಕೊಡಗು ಕಲೆ, ಸಾಹಿತ್ಯ, ಸಂಪತ್ತುಗಳಿಂದ ಕೂಡಿದ ಸಂಪದ್ಭರಿತ ಜಿಲ್ಲೆಯಾಗಿದೆ. ಆದರೆ ಈ ಕೊಡಗಿನ ಕಳೆಯನ್ನು ಕುಂದಿಸುವ ಒಂದು ಕುರುಹು ಜಾತಿ. ಈ ಜಾತಿ ಎನ್ನುವ ವಿಷ ಅನಿಲವು ಈ ನಮ್ಮ ದೇಶ ಹಾಗೂ ಮೇಲಾಗಿ ಕೊಡಗಿನಲ್ಲಿ ಪ್ರಸರಿಸಿದೆ.

ಈ ಜಾತಿ ಎನ್ನುವ ಪದವನ್ನು ಉಂಟು ಮಾಡಿದವರು ಯಾರು? ಎಲ್ಲರೂ ಒಂದೇ, ದೇವರು ಒಬ್ಬನೇ ಎಂದು ಸಾರುವ ಪವಿತ್ರ ಗ್ರಂಥಗಳಂತೂ ಅಲ್ಲ. ಈ ಜಾತಿ ಎಂಬ ಪದವು ಹುಟ್ಟಿನಿಂದ ಬಂದದ್ದೆ? ಅಲ್ಲ ಹಿರಿಯರ ಮೂಲಕ ಬಂದದ್ದೆ? ಅದು ಯಾರಿಗೂ ತಿಳಿದಿಲ್ಲ. ಆದರೆ ಈ ಜಾತಿ ಎನ್ನುವ ಭೇದ ಭಾವ ಎಲ್ಲಿಂದ ಬಂತು? ಎಂಬುದೇ ನಮ್ಮ ಮುಂದೆ ಪ್ರಶ್ನೆಯಾಗಿ ಉಳಿದಿದೆ. ನಮ್ಮ ದೇಹದಲ್ಲಿ ಹರಿಯುವ ರಕ್ತ ಒಂದೇ, ವಾಸಿಸುವ ಭೂಮಿ ಒಂದೇ, ಕುಡಿಯುವ ನೀರು ಒಂದೇ ಆದರೆ ಜಾತಿ ಮಾತ್ರ ಕೊಡಗ, ಗೌಡ, ಬ್ರಾಹ್ಮಣ ಎಂದು ಹಲವಾರು. ಏಕೆ? ಇದಕ್ಕೆ ಕಾರಣವೇನು ?

ಕುವೆಂಪುರವರ ಕಾವ್ಯವಾದ, ಎಲ್ಲಾ ಭೇದ ಮರೆತು ಬನ್ನಿರಿ ನಾವು ಸಮಾನ ಸಾರುವ ಇಂದು ಎಲ್ಲರು ಒಂದು ಇದುವೇ ನವಗಾನ ಎಂದು ಏಕೆ ಹಾಡಬಾರದು ? ಈ ಜಾತಿ ಎನ್ನುವ ಭೇದಭಾವವನ್ನು ನಾವೆಲ್ಲರೂ ಮರೆತು ಎಲ್ಲರೂ ಒಂದುಗೂಡಿದರೆ ಯಾವ ಸಮಸ್ಯೆಯನ್ನು ಬೇಕಾದರೂ ಬಗೆಹರಿಸಬಹುದು. ಏಕೆಂದರೆ ಒಗ್ಗಟ್ಟಿನಲ್ಲಿ ಬಲವಿದೆ. ಜಾತಿ ಎಂಬುದು ಒಂದು ರೋಗವಿದ್ದಂತೆ ಆದುದರಿಂದ ಅದನ್ನು ಖಂಡಿತವಾಗಿಯೂ ವಾಸಿ ಮಾಡಬಹುದು. ಎಲ್ಲಾ ವ್ಯಕ್ತಿಗಳ ರೋಗವನ್ನು ವಾಸಿಮಾಡಲಾಗದಿದ್ದರು ಸಹ ಹೆಚ್ಚಿನವರು ಗುಣಮುಕ್ತರಾದರೆ ಜಾತಿ ಎಂಬ ರೋಗವನ್ನು ತೊಡೆದು ಹಾಕಬಹುದು. ಒಂದು ವ್ಯಕ್ತಿಯ ಸ್ಥಾನವನ್ನು ಅವನ ವಿದ್ಯೆ ಮತ್ತು ಉದ್ಯೋಗದಿಂದ ಅಳಿಯಬೇಕ ಹೊರತು ಅವನ ಜಾತಿಯಿಂದ ಅಲ್ಲ. ಏಕೆಂದರೆ ವಿದ್ಯೆಮತ್ತು ಬುದ್ಧಿವಂತಿಕೆ, ಉದ್ಯೋಗದಿಂದ ಅವನ ಆಸೆ ಆಕಾಂಕ್ಷೆಗಳನ್ನು ಪೂರೈಸಬಹುದು. ಆದರೆ ಜಾತಿ ಯಾವ ಆಸೆಯನ್ನು ಪೂರೈಸುವುದಿಲ್ಲ. ಅದು ಮನುಷ್ಯರ ನಡುವೆ ಮತ್ಸರವನ್ನು ಉಂಟು ಮಾಡುತ್ತದೆ. ಹಾಗೆಯೇ ಕೊಡಗಿನ ಏಳಿಗೆಗಾಗಿ ಹೋರಾಡುವ ಸಂಘ ಸಂಸ್ಥೆಗಳು ತನ್ನ ಯಶಸ್ಸು ಕಾಣಬೇಕಾದರೆ ಈ ಜಾತಿ ಎಂಬ ತೊಡಕನ್ನು ತೆಗೆದುಹಾಕಬೇಕು. ಹಾಗಾದರೆ ಮಾತ್ರ ಅದು ಅದರ ಗುರಿ ಮುಟ್ಟಲು ಸಾಧ್ಯವಾದೀತೇನೋ. ಇಲ್ಲದಿದ್ದಲ್ಲಿ ಅಲ್ಲಿ ಮೇಲು ಕೀಳು ಎಂಬ ಭಾವನೆಯಿಂದ ಅದು ಅದರ ಯಶಸ್ಸಿನ ಮೆಟ್ಟಲು ಹತ್ತಲು ಸಾಧ್ಯವಾಗಲಿಕ್ಕಿಲ್ಲ.

ಕೊಡಗು ಸಣ್ಣ ಜಿಲ್ಲೆಯಾದರೂ ಅದು ದೊಡ್ಡ ಸಮಸ್ಯೆಯನ್ನೇ ಬಗೆಹರಿಸಬೇಕಾಗಿದೆ. ಆದರೆ ಅದಕ್ಕೆ ಜನರ ಸಹಕಾರ ಪ್ರೋತ್ಸಾಹ ತುಂಬಾ ಮುಖ್ಯ. ಜನರ ಸೇವೆಯೇ ಜನಾರ್ಧನ ಸೇವೆ ಎಂಬಂತೆ ಕೊಡಗಿನ ಎಲ್ಲಾ ಯುವಕ ಯುವತಿಯರ ಮನಸ್ಸಿನಲ್ಲಿ ಜಾಗೃತಿ ಮೂಡಿಸಬೇಕು. ನಾವೆಲ್ಲರು ಭಾರತೀಯರು ಎಂಬ ಭಾವನೆ ಬರಬೇಕು. ಇದರಿಂದ ಈ ಸಮಸ್ಯೆಯನ್ನು ಬಗೆಹರಿಸಬಹುದು. ಇದರಿಂದ ಕೊಡಗಿನ ಕಲೆ, ಸಾಹಿತ್ಯ ಎಲ್ಲಾ ಮುಂದುವರೆಯುವ ಸಾಧ್ಯತೆ ಇದೆ. ಇದರಿಂದ ಕೊಡಗು ತನ್ನ ಸ್ಥಾನವನ್ನು ಇನ್ನೂ ಭದ್ರವಾಗಿ ಕಂಗೊಳಿಸಲು ಸಾಧ್ಯವಾಗುತ್ತದೆ. ಜಾತಿ ಭೇದ ತೊರೆದು ಹಾಕದೆ ಕೊಡಗಿನ ಯಾವುದೇ ಸಂಘ ಸಂಸ್ಥೆಗಳು ಎಷ್ಟೇ ಪ್ರಯತ್ನ ಮಾಡಿದರೂ ಅದು ಎಲ್ಲಾ ವ್ಯರ್ಥವಾಗುತ್ತದೆ. ನಮಗೆ ಈ ಜಾತಿ, ಭೇದ, ಭಾವ ಅಡ್ಡಲಾಗಿ ಬರದೆ ಇದ್ದರೆ ನಮ್ಮ ಜಯ ನಮಗೆ ಖಂಡಿತವೆಂದು ನನ್ನ ಅಭಿಪ್ರಾಯವಾಗಿದೆ. ●

—ಕಾನೆಹಿತ್ಲು ನಳಿನಿ ನಂಜಪ್ಪ, ಕುಶಾಲನಗರ.
[3ನೇ ವರ್ಷದ ಎಲ್ಎಲ್.ಬಿ.]

## ಚು ಟು ಕ

ಒಬ್ಬ ಮುಸಲ್ಮಾನನು ಗಣಪತಿ ಅಥವಾ ಕೃಷ್ಣಪ್ಪ ಎಂಬ ಹೆಸರಿನವರನ್ನು ಕಂಡರೆ ದೂರದಿಂದಲೇ ನಮಸ್ಕಾರ ಮಾಡುವನು. ಆದರೆ ಮಹಾಗಣಪತಿ ಶ್ರೀಕೃಷ್ಣ ಎಂದು ಕರೆಯಲ್ಪಡುವ ದೇವರಿಗೆ ಸಲಾಮ್ ಮಾಡಿದರೆ ಧೈವ ವಿರೋಧವೆಂದು ತಿಳಿಯುವನು.

❀ ❀ ❀

ಹಾಗೆಯೇ ಒಬ್ಬ ಹಿಂದೂ ಮಹಮ್ಮದ್ ಅಥವಾ ಹುಸೇನ್ ಎಂಬ ಹೆಸರಿನ ವ್ಯಕ್ತಿಗೆ ವಂದಿಸುವನು ಆದರೆ ಮೊಹಮ್ಮದ್ ಪೈಗಂಬರ ದೇವರಿಗೆ ನಮಿಸುವುದು ಧರ್ಮಬಾಹಿರ ಎಂದು ತಿಳಿಯುವನು.

—ಮುಕ್ಕಾಟಿ ಮಮತಾ ಪೂಣಚ್ಚ, ಹೊಸ್ಕೇರಿ.

# ಗೌಡರ ವಿವಾಹ ಪದ್ಧತಿಯ ಅವಲೋಕನ

[ಹಿಂದಿನ ಸಂಚಿಕೆಯಿಂದ]

ಆದ್ದರಿಂದ ಗೌಡರ ಮದುವೆ ಪದ್ಧತಿಗೆ ಜ್ಯೋತಿಷ್ಯ ಶಾಸ್ತ್ರದ ಪೂರ್ಣರೀತಿಯ ಬಳಕೆ ಇದೆ ಎಂಬುದು ಇದರಿಂದ ತಿಳಿಯುತ್ತದೆ. ಆದುದರಿಂದ ಗೌಡರಲ್ಲಿ ಹೆಣ್ಣು ಗಂಡಿನ ಆಯ್ಕೆಗೆ ಈ ಕೂಟಗಳನ್ನು ಅನುಸರಿಸಿ ಅದೇ ರೀತಿ ವಿವಾಹ ಮಂಟಪದ ಚಪ್ಪರದ ಕಂಬಗಳನ್ನು ಹಾಕುತ್ತಾರೆನ್ನಬಹುದು.

ಋಗ್ವೇದ ಶಾಸ್ತ್ರೋಕ್ತ ವಿವಾಹ ಪದ್ಧತಿಯ ಪ್ರಕಾರ 'ಸೀಮಂತ ಮಾಡುವ ಕನ್ಯಾದಾನ ಮಾಡುವವನು ವರನಲ್ಲಿಗೆ ಹೋಗಿ ವರಪೂಜೆಯನ್ನು ಮಾಡಿ, ವಿಘ್ನೇಶ್ವರನಾದ ಗಣಪತಿಯ ಪೂಜೆಯನ್ನು ಮಾಡುವನೆಂದು ನಿಶ್ಚಯಿಸುವನು' ಎಂಬುದಾಗಿ ಹೇಳಿದೆ. ಅದೇ ರೀತಿ ಗೌಡರ ಮದುವೆ ಚಪ್ಪರದಲ್ಲಿ 'ಹಾಲು ಬರುವ' ಮರದ ಕಂಬವನ್ನು ನೆಟ್ಟು ಗಣಪತಿ ಪೂಜೆಯನ್ನು ಮಾಡಿ ಮುಹೂರ್ತ ಚಪ್ಪರ ಹಾಕುವುದಕ್ಕೆ ಪ್ರಾರಂಭಿಸುತ್ತಾರೆ.

ಮದುಮಕ್ಕಳು ಮುಹೂರ್ತ ಚಪ್ಪರದಡಿಯಲ್ಲಿ ಎಣ್ಣೆ ಅರಶಿನ ಶಾಸ್ತ್ರವನ್ನು ಮುಗಿಸಿ, ಸ್ನಾನಮಾಡಿ ನಂತರ ಗಂಗೆ ಪೂಜೆಯನ್ನು ಮಾಡುತ್ತಾರೆ.

ಗೌರಿ—ಹರ ಪೂಜೆ ಆಚರಣೆಯನ್ನು ಈ ರೀತಿ ಹೇಳಿದೆ :

'ವಧೂವರರು ಸ್ನಾನ ಮುಗಿಸಿದ ಬಳಿಕ ವಿವಾಹಕ್ಕೆ ಇರುವ ಮಂಗಳಕರವಾದ ವಸ್ತ್ರಗಳನ್ನು ತೊಟ್ಟು ಅರಿಶಿನದಿಂದಾವೃತವಾದ ಗೌರಿಯನ್ನು ಅರಿಶಿನ ಮಿಶ್ರಿತ ಅಕ್ಕಿಯಿಂದ ಪೂಜಿಸಿ, ಅದೇ ಅಕ್ಕಿ ಯಾವ ಇಂದ್ರಾಣಿಗೆ ಪ್ರಿಯವಾಗಿದೆಯೋ ಆ ದೇವೇಂದ್ರನ ರಾಣಿಯಾದ ಇಂದ್ರಾಣಿಯನ್ನು ಪೂಜಿಸಿ ಆರೋಗ್ಯವನ್ನೂ ದಯಪಾಲಿಸುವಂತೆ ಕೋರುವರು.

ಹೆಣ್ಣಿನ ಮನೆಯಲ್ಲಿ ಧಾರೆಯ ನಂತರ ಹೆಣ್ಣನ್ನು ಇಳಿಸುವಾಗ ಮುತ್ತೈದೆಯರು ಗಂಡಿನ ಕಡೆಯವರನ್ನು ಈ ರೀತಿಯಾಗಿ ಕೇಳಿಕೊಳ್ಳುತ್ತಾರೆ :

'ಪಟ್ಟೆ ಅಂಚಿನ ಮುದ್ದು ಮುತ್ತಿನ ಉಂಗುರವನ್ನಿಟ್ಟು। ಮುತ್ತಿನ ಹರಿವಾಣ ಬಲಗೈಲಿ ॥ ಮುತ್ತಿನ ಹರಿವಾಣ ಬಲಗೈಲಿ ಹಿಡಕೊಂಡು । ಮಗಳ ನಿಮ್ಮೊಶ ಕೊಡುತ್ತೇವೆ ॥ ಸಾಲು ಅಂಚಿನ ಮುದ್ದು ನೀಲದುಂಗುರವನ್ನಿಟ್ಟು । ನೀಲದರಿವಾಣ ಬಲಗೈಲಿ । ನೀಲದರಿವಾಣ ಬಲಗೈಲಿ । ನೀಲದರಿವಾಣ ಬಲಗೈಲಿಕೊಂಡು । ಮಗಳ ನಿಮ್ಮೊಶ ಕೊಡುತ್ತೇವೆ ॥ ಆರುವರುಷ ಸಾಗಲಿಲ್ಲ. ಬಾಯಿ ಹಲ್ಲು ತೆಗೆಯಲಿಲ್ಲ । ಆರೆಂಬಲೆಕ್ಕ ಅರಿಯಾಳು ! ಆರೆಂಬ ಲೆಕ್ಕ ಅರಿಯಾಳು ನಮ್ಮಗಳು । ಮಗಳ ನಿಮ್ಮೊಶ ಕೊಡುತ್ತೇವೆ ॥ ಏಳು ವರ್ಷ ಸಾಗಲಿಲ್ಲ । ಬಾಯಿ ಹಲ್ಲು ತೆಗೆಯಲಿಲ್ಲ । ಏಳೆಂಬ ಲೆಕ್ಕ ಅರಿಯಾಳು । ಏಳೆಂಬ ಲೆಕ್ಕ ಅರಿಯಾಳು ನಮ್ಮಗಳು । ಗಿಂಡಿ ಬೆಳಗಲಿಕ್ಕೆ ಅರಿಯಾಳು ಅಂಗಳ ಗುಡಿಸೋಳಲ್ಲ. ತಂಗಳ ಊಟ ಮಾಡೋಳಲ್ಲ । ಅಂಗಳದಲ್ಲಿ ಆಟ ಆಡಿ ಬರುವ ಶಿಶು ಮಗಳ । ನಿಮ್ಮೊಶ ಕೊಡುತ್ತೇವೆ ॥ ತಾಯಿಗು ತಂದೆಗೂ ಮೋಹದ ಕಿರಿಮಗಳು । ಸೆಲೆ ತುಪ್ಪ ಬಿಟ್ಟು ಸಲುಗ್ಯಾರು । ಸಲೆತುಪ್ಪ ಬಿಟ್ಟು ಸಲಗೀದ ನಮ್ಮಗಳ ನಿಮ್ಮೊಶ ಕೊಡುತ್ತೇವೆ ॥ ಅಣ್ಣಗೂ ತಮ್ಮಗೂ ಮೋಹದ ಕಿರುತಂಗಿ । ಸೆಲೆ ಎಣ್ಣೆ ಬಿಟ್ಟು ಸಲುಗ್ಯಾರು । ಸೆಲೆ ಎಣ್ಣೆ ಬಿಟ್ಟು ಸಲುಗ್ಯಾರು । ತಂಗೀಯ ನಿಮ್ಮೊಶ ಕೊಡುತ್ತೇವೆ ॥ ಹಣ್ಣಡಿಕೆ ಎಲೆ ಮೆದ್ದು ಕಣ್ಣಿಗೆ ಕನವಿದರ್ । ತಂದೆ ಕೊಡಿಮೇಲೆ ಒರಗ್ಯಾಳು ನಮ್ಮಗಳು । ಮಗಳ ನಿಮ್ಮೊಶ ಕೊಡುತ್ತೇವೆ ॥ ಕಾಯಡಿಕೆ ಎಲೆ ಮೆದ್ದು ಕಣ್ಣಿಗೆ ಕನವಿದರ್ । ತಂದೆ ತೊಡೆಮೇಲೆ ಒರಗ್ಯಾಳು ನಮ್ಮಗಳು। ಮಗಳ ನಿಮ್ಮೊಶ ಕೊಡುತ್ತೇವೆ ॥ ಕಾಯಡಿಕೆ ಎಲೆ ಮೆದ್ದು ಕಣ್ಣಿಗೆ ಕನವಿದರ್ ತೊಡೆ ಮೇಲೆ ಒರಗ್ಯಾಳು ಶಿಶು ಮಗಳ । ಮಗಳ ನಿಮ್ಮೊಶ ಕೊಡುತ್ತೇವೆ ॥ ಮುತ್ತಿನ ಕಂಬ ಈಗೆರಡು ಇದ್ದಾವು । ಮುತ್ತಿನಂತ ಕಂಬ ಜೋಡನಾದೊ॥ ಕನ್ನೆ ಹುಟ್ಟಿದ ಮೇಲೆ ಕನ್ನಡಿ ಯಾಕವ್ವ । ಕನ್ನೆ ತಂಗ್ಯವ್ವ ಒಳಗಿಂದ । ಕನ್ನೆ ತಂಗವ್ವ ಒಳಗಿಂದ ಬರುವಾಗ ಕನ್ನಡಿಯಂತೆ ಹೊಳೆದಾಳು ॥ ಬಾಲೆ ಹುಟ್ಟಿದ ಮನೆಗೆ ಬೀಸಣಿಕೆ ಯಾಕವ್ವ । ಬಾಲೆ ತಂಗ್ಯವ್ವ ಹೊರಗಿಂದ ಬರುವಾಗ ಬೀಸಣಿಕೆ ಸಾಕು ಮನೆಗೆಲ್ಲಾ ॥ ಆಡುವಾಟವ ಬಿಟ್ಟು ಓದುವ ಪುಸ್ತಕ ಬಿಟ್ಟು । ಅಣ್ಣ ತಮ್ಮಂದಿರ ಮನೆ ಬಿಟ್ಟು । ಈ ಮಗಳ ನಿಮ್ಮೊಶ ಕೊಡುತ್ತೇವೆ ॥ ಒಂದು ಮೆಟ್ಟು ಇಳಿದಾಳು ಹಿಂದಿರುಗಿ ನೋಡ್ಯಾಳು । ಅಪ್ಪಯ್ಯ ಬನ್ನಿಂತಾ ಕರೆದಾಳು । ಅಪ್ಪಯ್ಯ ಬನ್ನೀಂತ ಕರೆದು ಮಾತಾಡಲು ತುಂಬಿದ ಕಣ್ಣ ಜಲನೀರು । ತುಂಬೀದ ಕಣ್ಣ ಜಲನೀರು ಹರಿದಾವು । ಪಟ್ಟೆ ಸೆರಗೆಲ್ಲಾ ನೆನೆದಾವು । ಎರಡು ಮೆಟ್ಟು ಇಳಿದಾಳು ಹಿಂದೆ ತಿರುಗಿ ನೋಡ್ಯಾಳು । ತಾಯವ್ವ ಬನ್ನೀಂತ ಕರೆದಾಳು ತಾಯವ್ವ ಬನ್ನೀಂತ ಕರದು ಮಾತಾಡಲು ತುಂಬಿದ ಕಣ್ಣ ಜಲನೀರು। ತುಂಬಿದ ಕಣ್ಣ ಜಲನೀರು ಹರಿದಾವು । ಸಾಲು ಸೆರಗೆಲ್ಲಾ ನೆನೆದಾವು ॥ ಮೂರು ಮೆಟ್ಟಿಲು ಇಳಿದಾಳು ಹಿಂದೆ ತಿರುಗಿ ನೋಡಿಯಾಳು । ಅಣ್ಣಯ್ಯ ಬನ್ನೀಂತ ಕರೆದಾಳು । ಅಣ್ಣಯ್ಯ ಬನ್ನೀಂತ ಕರೆದು ಮಾತಾಡಲು ತುಂಬಿದ ಕಣ್ಣ ಜಲನೀರು । ತುಂಬಿದ ಕಣ್ಣ ಜಲನೀರು ಹರಿದಾವು ಸಾಲು ಸೆರೆಗೆಲ್ಲಾ ನೆನೆದಾವು ಸಾಲು ಸೆರೆಗೆಲ್ಲಾ ನೆನೆದಾವು ॥ ಮೂಡಣ ಮಂಟಪದಲಿ ನಿಂತಾಳು ಮದುಮಗಳು । ಕೂಡ್ಯಾಡಿ ಆಡುವ ಸಂಸಾರ । ಕೂಡ್ಯಾಡಿ ಆಡುವ ಸಂಸಾರ ಕರೆದು ಮಾತಾಡಲು । ತುಂಬಿದ ಕಣ್ಣ ಜಲನೀರು ॥ ತಾಯಿ ತಂದೆಯರೆಲ್ಲ ಮುತ್ತಿನ ತೋರಣ ತನಕ । ಚಿಕ್ಕಕ್ಕ ಮಕ್ಕಳು ಹೊಳೆ ತನಕ । ಚಿಕ್ಕಕ್ಕ ಮಕ್ಕಳು ಹೊಳೆತನಕ ಬರುವಾಗ । ಚಿಂತಿಸದಿರು ಮಗಳೇ ಮನದಲ್ಲಿ ॥

[ಮುಂದಿನ ಸಂಚಿಕೆ ನೋಡಿ]

ಲೇಖನ : ಪೂಜಾರಿ ಮೊಣ್ಣಪ್ಪ

# ಆರೋಗ್ಯ ಚಿಂತನ :

ಶ್ರೀ

## ಹುರುಕು ಕಜ್ಜಿ [Scabies]

ಡಾ॥ ಎಸ್. ಎಸ್. ಪ್ರವೀಣ ಎಂ ಡಿ., ಕೇರಳ

ಕಜ್ಜಿ ಒಂದು ಸಾಮಾನ್ಯ ರೋಗವಾಗಿದೆ. ಮಕ್ಕಳಲ್ಲಿ ಇದು ಹೆಚ್ಚಾಗಿ ಕಾಣಿಸಿಕೊಳ್ಳುತ್ತದಾದರೂ ಯಾವ ವಯಸ್ಸಿನವರಲ್ಲೂ ಬರಬಹುದು.

ಕಜ್ಜಿ ಬರಲು 'ಸಾರ್ಕಾಪ್ಟಸ್ ಸ್ಕೇಬಿಯೇ' ಎಂಬ ಸಣ್ಣ ಹುಳು ಕಾರಣವಾಗಿದೆ. 0.4 ಮಿ.ಮಿ. ನಷ್ಟು ಉದ್ದವಿರುವ ಈ ಹುಳ ಚರ್ಮದೊಳಗೆ ಸುರಂಗ ನಿರ್ಮಿಸಿ ವಾಸಿಸಿದಾಗ ಬರುವ ರೋಗವಿದು. ಆ ಜಾಗವನ್ನು ಮುಟ್ಟುವುದರಿಂದ, ಅವರ ಹಾಸಿಗೆ ಬಟ್ಟೆ ಉಪಯೋಗಿಸುವುದರಿಂದ ರೋಗ ಇನ್ನೊಬ್ಬರಿಗೆ ಸುಲಭವಾಗಿ ಹರಡುತ್ತದೆ. ಕಜ್ಜಿ ಹುಳು ಚರ್ಮದ ಮೇಲ್ಪದರದಲ್ಲಿ ಕೊರೆಯುತ್ತಾ ಮೊಟ್ಟೆಗಳನ್ನಿಡುತ್ತದೆ. ಮೊಟ್ಟೆಯೊಡೆದು ಅನಂತರ ಲಾರ್ವಾ ಚರ್ಮದ ಮೇಲ್ಭಾಗಕ್ಕೆ ಬರುತ್ತದೆ. ಬಳಿಕ 10 ದಿನಗಳಲ್ಲಿ ಇವು ಪ್ರೌಢ ಹುಳುಗಳಾಗಿ ಬೆಳೆಯುತ್ತವೆ. ಪ್ರೌಢ ಹುಳು ಒಂದರಿಂದ ಎರಡು ತಿಂಗಳ ಕಾಲ ಬದುಕಿರುತ್ತವೆ. ಈ ಹುಳಕ್ಕೆ ಅಲರ್ಜಿಯಾಗಿ ದೇಹದ ಮೇಲೆ ಅತಿಯಾದ ತುರಿಕೆ ಉಂಟಾಗಿ ಗುಳ್ಳೆಗಳೇಳುತ್ತವೆ. ಇದನ್ನೇ ನಾವು ಕಜ್ಜಿ ಎನ್ನುತ್ತೇವೆ.

ಕಜ್ಜಿ ನಿಕಟ ಸಂಪರ್ಕದಿಂದ ಒಬ್ಬರಿಂದೊಬ್ಬರಿಗೆ ಹರಡುತ್ತದೆ. ದೇಹದ ಸ್ವಚ್ಛತೆಯ ಬಗ್ಗೆ ಗಮನ ಕೊಡದವರಲ್ಲಿ ಇದು ಹೆಚ್ಚಾಗಿ ಕಂಡುಬರುತ್ತದೆ. ಕಲುಷಿತಗೊಂಡ ಹಾಸಿಗೆ ಹೊದಿಕೆಗಳು, ಬಟ್ಟೆ ಬರೆಗಳು ರೋಗ ಹರಡಲು ಸಹಕಾರಿಯಾಗುತ್ತವೆ. ಇದರಿಂದಾಗಿ ಮನೆಯಲ್ಲಿ ಒಬ್ಬರಿಗೆ ಕಜ್ಜಿ ಬಂದರೆ ಎಲ್ಲರಿಗೂ ಹರಡಬಹುದು. ಕೈಯ ಬೆರಳುಗಳ ಮಧ್ಯೆ, ಮಣಿಕಟ್ಟು, ಮೊಣಕೈ, ಕಿಬ್ಬೊಟ್ಟೆಯ ಚರ್ಮ ಜನನಾಂಗದ ಭಾಗಗಳಲ್ಲಿ ಕಜ್ಜಿ ಹೆಚ್ಚಾಗಿ ಕಂಡುಬರುತ್ತದೆ. ಈ ಭಾಗಗಳಲ್ಲಿ ಗುಳ್ಳೆಗಳು ಕಂಡು ಬಂದು ರಾತ್ರಿ ಸಮಯದಲ್ಲಿ ಅತಿಯಾದ ತುರಿಕೆಯಿರುತ್ತದೆ. ಇದರ ಶಮನಕ್ಕಾಗಿ ಉಗುರಿನಿಂದ ಕೆರೆದುಕೊಂಡು ಗಾಯಗಳಾಗಿ ಸೋಂಕು ತಗಲಿ ಕೀವಾಗಬಹುದು. ಕೆಲವೊಮ್ಮೆ ಹದಗಡಲೆ ಎದ್ದು ಜ್ವರವೂ ಬರುತ್ತದೆ.

**ಚಿಕಿತ್ಸೆ :**

ಕಜ್ಜಿಗೆ ಸಮೂಹ ಚಿಕಿತ್ಸೆ ಅಗತ್ಯ, ಅಂದರೆ ಮನೆಯಲ್ಲಿ ಒಬ್ಬರಿಗೆ ಕಜ್ಜಿ ಆಯಿತೆಂದರೆ ಎಲ್ಲರಿಗೂ ಚಿಕಿತ್ಸೆ ಕೊಡಿಸಬೇಕು.

ಚಿಕಿತ್ಸೆಗೆ ಮುಂಚೆ ಚರ್ಮವನ್ನು ಚೆನ್ನಾಗಿ ತಿಕ್ಕಿ ಸ್ನಾನ ಮಾಡಬೇಕು. ಅನಂತರ ಬೆನ್‌ಜೈಲ್ ಬೆನ್ಜೊಯೇಟ್ [Benzyl Benzoate 25%] ಅಥವಾ ಗ್ಯಾಮಾ ಎಚ್. ಸಿ ಎಚ್. 0 5%...ದ್ರಾವಣವನ್ನು ಕತ್ತಿನಿಂದ ಕಾಲಿನವರೆಗೆ ಹಚ್ಚಿ 12 [ಹನ್ನೆರಡು] ಗಂಟೆಯ ಬಳಿಕ ಮತ್ತೊಮ್ಮೆ ಹಚ್ಚಬೇಕು. ಮತ್ತೆ 12 ಗಂಟೆಯ ಬಳಿಕ ಸ್ನಾನ ಮಾಡಬೇಕು. ಇದರಿಂದ ಕಜ್ಜಿ ಪೂರ್ಣವಾಗಿ ವಾಸಿಯಾಗುತ್ತದೆ ಉಪಯೋಗಿಸುವ ಬಟ್ಟೆ, ಹೊದಿಕೆ, ಟವಲ್ ಇತ್ಯಾದಿ ಎಲ್ಲವನ್ನೂ ಚೆನ್ನಾಗಿ ಕುದಿಸಿದ ನೀರಲ್ಲಿ ಅದ್ದಿ ಒಗೆದು ಬಿಸಿಲಲ್ಲಿ ಒಣಗಿಸಬೇಕು. ಹಾಸಿಗೆಯನ್ನು ಸಹ ಚೆನ್ನಾಗಿ ಬಿಸಿಲಲ್ಲಿ ಒಣಗಿಸಬೇಕು.

**ರೋಗ ತಡೆ :**

ದೇಹದ ಶುಚಿತ್ವದ ಕಡೆ ಗಮನ ಕೊಡಬೇಕಾದುದು ಈ ರೋಗದ ವಿರುದ್ಧದ ಮುಂಜಾಗರೂಕತಾ ಕ್ರಮದಲ್ಲಿ ಅತ್ಯವಶ್ಯಕವಾಗಿದೆ. ದಿನವೂ ಚೆನ್ನಾಗಿ ಸ್ನಾನ ಮಾಡುವುದರಿಂದ, ಶುಚಿಯಾದ ಬಟ್ಟೆಗಳನ್ನು ಧರಿಸುವುದರಿಂದ, ಉಗುರುಗಳನ್ನು ಚಿಕ್ಕದಾಗಿ ಕತ್ತರಿಸಿಕೊಳ್ಳುವುದರಿಂದ ಇತ್ಯಾದಿ ಪ್ರಾಥಮಿಕ ಶುಚಿತ್ವದ ಕ್ರಮಗಳನ್ನು ಅನುಸರಿಸಿದುದೇ ಆದಲ್ಲಿ ಈ ರೋಗದಿಂದ ದೂರವಿರಬಹುದಾಗಿದೆ. ●

## ಜ್ಞಾಪಕದಲ್ಲಿಡಿ

1. ಎರಡನೇ ವಿಶ್ವ ಸಮರದ ಸಮಯದಲ್ಲಿ ಅಮೇರಿಕವು ಅಣುಬಾಂಬನ್ನು ಅಭಿವೃದ್ಧಿ ಪಡಿಸಲು ನಡೆಸಿದ ರಹಸ್ಯವಾದ ಯೋಜನೆಯ ಹೆಸರು—ಮ್ಯಾನ್‌ಹಟನ್ ಯೋಜನೆ.

2. ಆದಿ ಗ್ರಂಥ್ ಅನ್ನು ಬರೆದವರು — ಗುರು ಅರ್ಜುನ್‌ದೇವ್

3. ಕಾಶ್ಮೀರದ ದೋಣಿಗೆ ಶಿಕಾರ ಎಂದು ಹೆಸರು.

4. ಮಾನವನ ಕಣ್ಣಿಗೆ ಪಾಪೆಯು ಕತ್ತಲು, ಬೆಳಕುಗಳಿಗೆ ಪ್ರತಿಕ್ರಿಯಿಸುವಾಗ ತನ್ನ ಸಹಜ ಗಾತ್ರದ ಕೆಲವು ಪಟ್ಟು ದೊಡ್ಡದಾಗಿ ಹಿಗ್ಗುತ್ತದೆ.

5. ಸೇಂಟ್ ಬರ್ನಾರ್ಡ್ ಎಂಬ ಪ್ರಭೇದದ ನಾಯಿಯು ಅತಿ ಎತ್ತರವಾಗಿ ಬೆಳೆಯುತ್ತದೆ.

6. ವೆಸರ್ ನದಿಗೆ ಇಲಿಗಳನ್ನು ಕರೆದೊಯ್ದವರು— ಪೈಡ್ ಪೈಪರ್

—ಶ್ವೇತಾ, ಮೈಸೂರು.

## ಕೊಡಗು ಸಂಗಾತಿ

ಹಸಿರು ತುಂಬಿದ ಬೆಟ್ಟಗುಡ್ಡಗಳ ಸಾಲಿನಂತೆ
ಝುಳು ಝುಳು ನಿನಾದ ತುಂಬಿದ ನದಿಯಂತೆ
ಹೊಸಚಿಗುರು ತುಂಬಿದ ಮಾಮರದಂತೆ
ಹುಣ್ಣಿಮೆ ಬೆಳಕನ್ನು ಹೊರಸೂಸುವ ಚಂದಿರನಂತೆ
ಇಂದು ಮನೆಮನೆಯಲ್ಲಿ ಶೋಭಿಸುತ್ತಿದೆ
ಈ ನಮ್ಮ ಕೊಡಗು ಸಂಗಾತಿ.

ಮಕರಂದ ತುಂಬಿದ ಸುಂದರ ಗುಲಾಬಿಯಂತೆ
ಇಂಪಾಗಿ ಹಾಡುವ ಕೋಗಿಲೆಯ ಹಾಡಿನಂತೆ
ದಟ್ಟ ಕಾಡಿನಲ್ಲಿ ಭೃಂಗಸಂಗದ ಝೇಂಕಾರದಂತೆ
ಕೊಳೆಯನ್ನೇ ಕಾಣದ ತಿಳಿನೀರ ಸರೋವರದಂತೆ
ಇಂದು ಕನ್ನಡಿಗರ ಮನೆ ಮನೆಯಲ್ಲಿ ಕಂಗೊಳಿಸುತ್ತಿದೆ
ಈ ನಮ್ಮ ಕೊಡಗು ಸಂಗಾತಿ.

ಮುಸ್ಸಂಜೆಯ ಸುಂದರ ಬಿಸಿಲಿನಂತೆ
ಘಮಘಮಿಸಿ ಪರಿಮಳವನ್ನು ಸೂಸುವ ಮಲ್ಲಿಗೆಯಂತೆ
ಕಾಳಿದಾಸನ ಲತೆಯಂತಹ ಸ್ತ್ರೀಯಂತೆ
ಸುಂದರವಾದ ಶುಭ್ರವಾದ ನೀಲಾಕಾಶದಂತೆ
ತನ್ನ ನಿಜರೂಪವನ್ನು ತೋರುತಿದೆ
ಈ ನಮ್ಮ ಕೊಡಗು ಸಂಗಾತಿ.

—ಗೌಡುದಾರೆ ರೀನಾ ರಾಮಯ್ಯ,
ಕೆದಮುಳ್ಳೂರು

## ಪ್ರಳಯ

ಪ್ರಳಯ ಈ ಶತಮಾನದಲ್ಲಿ ನಡೆಯುವ ಮಾನವ ಕುಲದ ಸರ್ವನಾಶ ಎಂದು ಜನರಲ್ಲಿ ತುಂಬಿಕೊಂಡಿದೆ. ಕೆಲವು ಜನರು ಭಯದಿಂದ ಜೀವನ ನಡೆಸುತ್ತಿದ್ದಾರೆ ಅಲ್ಲದೆ ಪ್ರಳಯ ಆಗುವುದು ಖಂಡಿತಾ ಎಂದು ಭಾವಿಸಿ ದಿನ ನಿತ್ಯ ಜೀವನದಲ್ಲಿ ಕೆಲವರು ಉದಾಸೀನತೆಯನ್ನು ವ್ಯಕ್ತಪಡಿಸಿದ್ದಾರೆ. ಹೀಗೆ ಪ್ರಳಯದ ಬಗ್ಗೆ ನಂಬಿಕೆ ಇಟ್ಟು ಎಲ್ಲದರಲ್ಲೂ ಆಸಕ್ತಿ ಕಳೆದುಕೊಳ್ಳುವುದಕ್ಕಿಂತ ಪ್ರಳಯ ಎಂಬ ಶಬ್ದವನ್ನು ಪಕ್ಕದಲ್ಲಿಟ್ಟು ಮನುಷ್ಯ ತನ್ನಲ್ಲಿ ಅಡಗಿರುವ ಸ್ವಾರ್ಥ, ವಂಚನೆ, ದರೋಡೆ, ಮೋಸ ಹಿಂಸಾಚಾರಗಳನ್ನು ಕಡಿಮೆ ಮಾಡಿ ಸತ್ಯ, ಧರ್ಮ, ದೇವರು ಎಂಬುದನ್ನು ದಿನದಲ್ಲಿ ಒಮ್ಮೆಯಾದರೂ ಯೋಚಿಸಿಕೊಂಡರೆ ಭಾರತ ದೇಶ ಪ್ರಳಯಕ್ಕೆ ಸಿಲುಕಲಾರದು ಅಲ್ಲದೆ ಇತ್ತೀಚಿನ ದಿನಗಳಲ್ಲಿ ನಡೆಯುತ್ತಿರುವ ಸಾವು, ನೋವು, ಕಾಯಿಲೆ ಕಷ್ಟಗಳೇ ಪ್ರಳಯ ಎಂದು ತಿಳಿದು ಕೊಂಡರೆ ತಪ್ಪಾಗಲಾರದು. ●

—ಕಡ್ಯದ ಶ್ಯಾಮಲ ತಾರಣ್ಣಯ್ಯ, ಮೈಸೂರು.

## ದೊಡ್ಡದು

1. ಗಣಗಳಲ್ಲಿ ದೊಡ್ಡಗಣ ಹೆಗ್ಗಣ
2. ಮೀನಿನಲ್ಲಿ ದೊಡ್ಡ ಮೀನು ಜಾಮೀನು
3. ನೆಟ್ಟುಗಳಲ್ಲಿ ದೊಡ್ಡನೆಟ್ಟು ಬಾನೆಟ್ಟು
4. ಪೊಟ್ಟಣಗಳಲ್ಲಿ ದೊಡ್ಡ ಪೊಟ್ಟಣ ಬೆಂಕಿಪೊಟ್ಟಣ
5. ದಾನದಲ್ಲಿ ದೊಡ್ಡ ದಾನ ಮೈದಾನ
6. ಆಟದಲ್ಲಿ ಒಳ್ಳೆ ಆಟ ಪೆಟ್ಟಾಟ
7. ಅಕ್ಕಿಲಿ ಒಳ್ಳೆ ಅಕ್ಕಿ ಹಲಸಿನಕ್ಕಿ
8. ಆಳದಲ್ಲಿ ತುಂಬ ಆಳ ಹೊಕ್ಕಳ
9. ಭಾವನವರಲ್ಲಿ ದೊಡ್ಡಭಾವ ಅಭಾವ
10. ಡ್ರೈವರ್‌ಗಳಲ್ಲಿ ಒಳ್ಳೆಡ್ರೈವರ್ ಸ್ಕ್ರೂಡ್ರೈವರ್
11. ನಾಟಕದಲ್ಲಿ ಒಳ್ಳೆನಾಟಕ ಕರ್ನಾಟಕ
12. ಬರಹದಲ್ಲಿ ಒಳ್ಳೆ ಬರಹ ಹಣೆಬರಹ
13. ಸೀಗೆಯಲ್ಲಿ ಒಳ್ಳೆಸೀಗೆ ಹಾಸಿಗೆ
14. ರೇಟ್‌ಲಿ ತುಂಬ ರೇಟ್ ಕಾಂಕ್ರೇಟ್
15. ಆನೆಗಳಲ್ಲಿ ದೊಡ್ಡಆನೆ ಕಾರ್ಖಾನೆ
16. ಮನೆಗಳಲ್ಲಿ ದೊಡ್ಡಮನೆ ಬಲ್ಯಮನೆ
17. ಗೌಡರಲ್ಲಿ ದೊಡ್ಡ ಗೌಡ ಕುಂಭಗೌಡ

—ಸಿರಕಜೆ ಎಂ. ಲೋಕಪ್ರಕಾಶ್, ಭಾಗಮಂಡಲ

## ಸಂಗಾತಿ

ಸಂಗಾತಿ...ಸಂಗಾತಿ...ಕೊಡಗು ಸಂಗಾತಿ
ಅವಿರತವಾಗಿ ಮನೆಬಾಗಿಲಿಗೆ ಸಾರಿದೆ ಹೊಸ ಹೊಸ ಸಂಗತಿ
ಎನ್ನ ಅಂತರಂಗದ ಕದನ ತಟ್ಟಿದ ಸುಂದರ ಜೊತೆಗಾತಿ
ಕೊಡಗಿನ ಗೌಡ ಜನರಲ್ಲಿ ನೀನು ಮೂಡಿಸಿದೆ ಜಾಗೃತಿ
ಬಡಿದೆಬ್ಬಿಸಿದೆ ನವ ಯುವಕರ ಎದೆಯಲಿ ಹುದುಗಿದ
ಕಿಚ್ಚಿನ ಕ್ರಾಂತಿ
ವೃದ್ಧಾಪ್ಯದಲೂ ಹುಮ್ಮಸ್ಸು ತುಂಬಿದ ಜೀವನ ಸಂಕ್ರಾಂತಿ
ಎಳೆಯ ಮಕ್ಕಳಿಗೂ ಮನದಟ್ಟು ಮಾಡಿದೆ ನಮ್ಮ ಸಂಸ್ಕೃತಿ
ಕಿಲುಬುಗಟ್ಟಿದ ಅಜ್ಞಾನವ ತೊಳೆದು ನೀಡಿದೆ ಸ್ವಚ್ಛ ಕ್ರಾಂತಿ
ದಾರಿ ಕಾಣದೆ ತೊಳಲುವ ಜನಕೆ ನೀ ನೀಡಿದೆ ಜ್ಯೋತಿ
ಹಳ್ಳಿಗೂ ದಿಲ್ಲಿಗೂ ಸಂಪರ್ಕ ಕಲ್ಪಿಸಿ ತೊಲಗಿಸಿದೆ ಭ್ರಾಂತಿ
ಕೊಡಗಿನ ಗೌಡರ ವಿಶಿಷ್ಟ ಪರಂಪರೆಗೆ ಬೆಳಕನು ಚೆಲ್ಲಿ ಕೀರ್ತಿ
ಆ ಬಾಲ ವೃದ್ಧರ ನರನಾಡಿಯಲ್ಲೂ ಚೈತನ್ಯ ಚಿಮ್ಮಿದ ಖ್ಯಾತಿ
ಕನಸು ಕಾಣುತಾ ಬಳಲಿದ ಜನಾಂಗಕೆ ನೀಡಿದೆ ಸಂತೃಪ್ತಿ
ಅವಮಾನದ ನೋವಲಿ ಮಡಿದಾ ಹಿರಿಯರ ಆತ್ಮಕೆ ನೀಡಿದೆ
ಚಿರಶಾಂತಿ ||ಸಂಗಾತಿ||

—ಬಿಟ್ಟೀರ ಚೋಂದಮ್ಮ ಶಂಭು, ಬೆಂಗಳೂರು.

## ಹಿರಿಯರು ಮಾರ್ಗದರ್ಶಕರಾಗಬೇಕು

ಹುಟ್ಟು ಸಾವು ನಮ್ಮ ಕರ್ಮದ ಫಲ. ಹುಟ್ಟಿಗೆ ಕಾರಣ ಕರ್ಮ. ಹುಟ್ಟುವ ಯಾವ ಮಗೂ ಖಾಲಿ ಮನಸ್ಸಿನಿಂದ ಪ್ರಪಂಚಕ್ಕೆ ಬರುವುದಿಲ್ಲ. ಅದರಲ್ಲಿ ಆಗಲೇ ಏನೋ ಸಂಸ್ಕಾರ ವಿರುತ್ತದೆ. ಮಗು ಯಾವಾಗಲೂ ಕೆಲವು ಸ್ವಭಾವಗಳೊಡನೆ ಜನಿಸುವುದು. ಆದೇ ಅನುವಂಶಿಕ [heridity] ಧರ್ಮಗಳ ಗುರಿಯೋ ಆತ್ಮನಲ್ಲಿ, ಪರಮಾತ್ಮನಲ್ಲಿ ಕಾಣುವುದು. ಇದು ಏಕಮಾತ್ರ ವಿಶ್ವಧರ್ಮ. ಮಾನವ ಕೋಟಿಗೆ ಪ್ರೀತಿಯನ್ನು ಮತ್ತು ಅನುಕಂಪವನ್ನು ತೀರಿಸುವುದೇ ನಿಜವಾದ ಧರ್ಮದ ಪ್ರಮಾಣ.

ದೇಹವೇ ಒಂದು ಸ್ಮಶಾನ. ನಿತ್ಯ ಬೇಯುತ್ತಿರುತ್ತದೆ. ಕಾರಣ ದ್ವೇಷ, ಅಸೂಯೆ, ಭಯ, ಕಾಮ, ಕ್ರೋಧಗಳು ನಮ್ಮನ್ನು ಸುಡುತ್ತಿರುತ್ತದೆ. ಸುಖಕ್ಕೆ ಶಾಂತ ಬೇಕು. ಶಾಂತಿಗೆ ತೃಪ್ತಿ ಬೇಕು. ಶಾಂತಿ ತೃಪ್ತಿಯಿಂದ ನಮ್ಮನ್ನು ನಾವು ಸುಧಾರಿಸಿಕೊಳ್ಳಬೇಕು. ಇಲ್ಲಿ ಹಿರಿಯರ ಪಾತ್ರ ಮಹತ್ವದ್ದು. ನಾವು ಇಂದು ಯುವ ಜನಾಂಗ ದಾರಿ ತಪ್ಪಿದೆ ಎನ್ನುತ್ತೇವೆ. ದಾರಿ ಗೊತ್ತಿದ್ದೂ ತಪ್ಪಬಹುದು. ದಾರಿಯೇ ಗೊತ್ತಿಲ್ಲದ ಮೇಲೆ ತಪ್ಪುವುದು ಹೇಗೆ ?

ಹಿರಿಯರಿಗೆ ಮೊಟ್ಟ ಮೊದಲು ಒಳ್ಳೆಯ ದಾರಿ ಗೊತ್ತಿಲ್ಲ. ಅದಕ್ಕಾಗಿ ಯೋಚನೆಯನ್ನು ಮಾಡುವುದಿಲ್ಲ. ಇದೇ ನಮ್ಮ ಸಮಾಜದ ದುರಂತ. ಮೊಟ್ಟ ಮೊದಲು ಹಿರಿಯರು ಮಾರ್ಗದರ್ಶಕರಾಗಬೇಕು. ಅವರ ನಡೆ, ನುಡಿ, ಕಾರ್ಯಗಳಲ್ಲಿ ಏಕತ್ವ ವಿರಬೇಕು. ಅಂತವರು ಮಾತ್ರ ಮಾರ್ಗದರ್ಶಕರಾಗಲು ಅರ್ಹತೆ ಪಡೆಯುತ್ತಾರೆ. ನಮ್ಮ ಸಮಾಜದಲ್ಲಿ ಇಂದು ಕುಡಿತ ಪ್ರಾಧಾನ್ಯತೆ ಪಡೆದಿದೆ. ಹಿರಿಯರು ಗಂಟಲು ತುಂಬುವವರೆಗೆ ಕುಡಿದಲ್ಲಿ ಕಿರಿಯರ ಪಾಡೇನು ? ತಂದೆ ತಾಯಿ ಬೆಳಿಗ್ಗೆ ಏಳು ವಾಗ ಬೈದಾಡಿಕೊಂಡು ಎದ್ದರೆ, ಅದನ್ನು ನಿತ್ಯಕಾಣುವ ಮಕ್ಕಳು ಹೊಡೆದಾಡಿಕೊಂಡು ಏಳುತ್ತಾರೆ. ತಂದೆ ತಾಯಿಗಳು ಹೊಡೆದಾಡಿಕೊಂಡು ಎದ್ದರೆ ಮಕ್ಕಳು ಕೋವಿ ಕತ್ತಿ ಸಮೇತ ಎದ್ದು ಹೊಡೆದಾಡುತ್ತಾರೆ. ತಂದೆ ತಾಯಿಗಳು ಭಾಷೆ, ಜಾತಿ ಯನ್ನು ಬಿತ್ತಿದರೆ ಮಕ್ಕಳು ನ್ಯಾಯ, ನೀತಿಯನ್ನು ಬಿಸಾಕು ತ್ತಾರೆ. ಕಾರಣ ಮಕ್ಕಳೆಲ್ಲ ಹಿರಿಯರು. ಹಿರಿಯರ ಚಾಳಿ ಮನೆ ಮಂದಿಗೆಲ್ಲ ಎಂಬ ಮಾತಿದೆ. ಹಿರಿಯರಲ್ಲಿ ಹಿರಿಮೆ ಇರಬೇಕು.

ಹಿರಿಯರು ಮೊದಲು ತಮ್ಮನ್ನು ತಾವು ನಿಯಂತ್ರಿಸಿ ಕೊಳ್ಳಬೇಕು. ಪ್ರೀತಿ ಎಂದರೇನೆಂಬುದನ್ನು ಅರಿಯಬೇಕು. ಪ್ರೀತಿಯಿಂದ ಮಕ್ಕಳಲ್ಲಿ ಉತ್ಸಾಹ, ಸಾಹಸ, ಧೈರ್ಯ, ಬುದ್ಧಿ ಶಕ್ತಿ, ಪರಾಕ್ರಮ ತುಂಬಿರಬೇಕು. ನಮ್ಮ ಸಮಾಜ ಸಾಹಸ ಮಯ ಸಮಾಜ. ಹೈದನೇ ಆಗಲಿ, ಗೂಡಯೋ ಆಗಲಿ ಅದು ಸಮಾಜದ ಆಸ್ತಿ. ಅವರನ್ನು ರೂಢಿಸುವ ಜವಾಬ್ದಾರಿ ಹಿರಿಯರದು. ಮಕ್ಕಳನ್ನು ದೂಷಿಸಬೇಡಿ, ಪ್ರೀತಿಯಿಂದ ಪ್ರೋತ್ಸಹಿಸಿ. ಅದೇ ನಮಗೆ ಶ್ರೀರಕ್ಷೆ. ●

—ಚೇಂದ್ರಿಮಾಡ ಗ. ಮುತ್ತಪ್ಪ, ಕುಶಾಲನಗರ.

## ಹಾಸ್ಯ ಚಟಾಕಿ

ಹಿಂದೆ ಮಡಿಕೇರಿಯಲ್ಲಿ ಒಬ್ಬ ಖ್ಯಾತ ವಕೀಲರ ಮನೆಗೆ ಅವರ ಬಾವ ಬಂದಿದ್ದರು. ವಕೀಲರೂ ಭಾವನೂ ಮಂಗಳೂರು ರಸ್ತೆಯಲ್ಲಿರುವ ಅವರ ಮನೆಯಿಂದ ಕೋರ್ಟಿಗೆ ಜೊತೆಯಲ್ಲಿಯೇ ಹೊರಟರು. ವಕೀಲರ ಬಾವ ವಕೀಲರಿಗೆ ತಮ್ಮ ಕಷ್ಟ ಸುಖದ ವಿಷಯ ದಾರಿಯಲ್ಲಿ ಹೇಳುತ್ತಾ ಹೋದರು ಎಲ್ಲದಕ್ಕೂ 'ಹೂಂ' 'ಹೂಂ' ಎಂದು ಉತ್ತರಿಸುತ್ತಾ ಮಡಿಕೇರಿ ಕೋರ್ಟಿನ ಹತ್ತಿರ ಬಂದಾಗ ವಕೀಲರ ಬಾವ ಹೇಳಿದರು.

'ಬಾವ ನಾನು ಬರುತ್ತೇನೆ'

ಆಗ ವಕೀಲರು ಹೇಳಿದರು. ಇಷ್ಟೊತ್ತು ನನ್ನೊಡನೆ ಮಾತಾಡಿದವರು ನೀವಾ ಬಾವಾ ! ಎಂದು ಪಾಪದ ವಕೀಲರ ಬಾವನಿಗೆ ಏನನಿಸಿರಬಹುದೋ ಏನೋ.

❁ ❁ ❁

ಹಿಂದೆ ಕಾವೇರಿ ಸಂಕ್ರಮಣ ಜಾತ್ರೆಗೆ ಜನ ಬ್ರಹ್ಮಗಿರಿ ಬೆಟ್ಟವನ್ನು ಕಾಲುನಡಿಗೆಯಿಂದಲೇ ಹತ್ತಿ ಹೋಗುತ್ತಿದ್ದರು. ಹತ್ತುವಾಗ ಗೋವಿಂದಾ ! ಗೋವಿಂದಾ ಎಂದು ಹೇಳುತ್ತಾ ಹತ್ತುತ್ತಿದ್ದರು. ಅದೇ ರೀತಿ ಒಬ್ಬಳು ಮಲಬಾರಿನ ಹೆಂಗಸೂ ಬೆಟ್ಟವನ್ನು ಏರೆಯುವರೊಡನೆ ಹತ್ತುತ್ತಿದ್ದಳು. ಆದರೆ ಅವಳಿಗೆ ಗೋವಿಂದಾ ಎಂದು ಕರೆಯಲಿಕ್ಕೆ ಆಗುತ್ತಿರಲಿಲ್ಲ. ಕಾರಣ ಅವಳ ಗಂಡನ ಹೆಸರೂ ಗೋವಿಂದ ಎಂದು. ಆಗಿನ ಕಾಲದಲ್ಲಿ ಹೆಂಗಸರು ಗಂಡನ ಹೆಸರನ್ನು ಹೇಳುತ್ತಿರಲಿಲ್ಲ. ಆದ್ದರಿಂದ ಈ ಹೆಂಗಸು ಏರೆಯುವರು ಗೋವಿಂದಾ ! ಎಂದು ಕೂಗುತ್ತಿದ್ದಾಗ 'ನಾನೂ ಅಂಜನನ್ನೆ' ಅಂದರೆ ನಾನೂ ಹಾಗೇನೇ ಎಂದು ಹೇಳುತ್ತಿದ್ದಳು.

—ಪೂಜಾರಿ ಮೊಣ್ಣಪ್ಪ, ಬೆಂಗಳೂರು.

## ಹಿತನುಡಿ

ಕೇವಲ ಶಿಕ್ಷಣದಿಂದ ಜ್ಞಾನೋದಯವಾಗಲಾರದು. ಶೀಲದಿಂದ ಸಂಸ್ಕಾರಗೊಂಡ ಮನಸ್ಸೇ ಜ್ಞಾನೋದಯಕ್ಕೆ ಮಾರ್ಗವಾಗುತ್ತದೆ.

—ಎಸ್. ರಾಧಾಕೃಷ್ಣನ್

# ಸರ್ಪಗಂಧ !

**ಕೌಂಡಿನ್ಯ**

**ಧಾರಾವಾಹಿ—2**

ರೇವತಿ ಫೋಟೋ ತೆಗೆಸಿ ತನ್ನ ಬಗ್ಗೆ ಎಲ್ಲಾ ವಿವರಗಳನ್ನು ಬರೆದು ಅಂದೇ ಪೋಸ್ಟ್ ಮಾಡಿದಳು.

ರೇವತಿ ಉಳಿದಿರುವುದು ಹಾಸ್ಟೆಲ್‌ನಲ್ಲಿ. ಅವಳಿಗೆ ಯಾರಪ್ಪ ಸಂಬಂಧಿ ಎಂದರೆ ಅವಳ ಅಣ್ಣ ಮಾತ್ರ !

ಅವನಿರುವುದು ಬೇರೆಯ ಊರಿನಲ್ಲಿ ! ತಿಂಗಳಿಗೊಂದು ಸಲ ಬಂದು ಹಣ ನೀಡಿ ತಂಗಿಯನ್ನು ನೋಡಿಕೊಂಡು ಹೋಗುತ್ತಿದ್ದನು. ಅಗತ್ಯ ಇದ್ದಾಗ ಫೋನ್ ಮಾಡುತ್ತಿದ್ದನು.

ರೇವತಿ ಅಣ್ಣನಿಗೂ ತಿಳಿಸಲಿಲ್ಲ! ಮುಖ್ಯವಾಗಿ ಅವಳು ಇದನ್ನು ಸೀರಿಯಸ್ ಆಗಿ ಪರಿಗಣಿಸಿರಲಿಲ್ಲ. ಹೊಸ ಅನುಭವ ! ಎಂಜಾಯ್ ಮಾಡಲು ಅವಳು ಹೊಸ ಪ್ರಯತ್ನವನ್ನು ಈಗ ಮಾಡಿದ್ದಳು.

ಮಹಾಲಿಂಗನನ್ನು ನೋಡುವುದು !

ಹೇಗಿದ್ದಾನೋ ಈ ಶ್ರೀಮಂತ ಮಹಾಲಿಂಗ !

ರೇವತಿ ಅದೇಕೋ ನಗುತ್ತಿದ್ದಳು !

ಏನೇನೋ ಕಲ್ಪಿಸಿಕೊಂಡು...ತನಗೆ ತಾನೇ! ಕೆಲವೇ ದಿನಗಳಲ್ಲಿ ಅವಳಿಗೆ ಸಂಪಿಗೆ ಪುರದಿಂದ ಸಂದರ್ಶನಕ್ಕೆ ಕರೆ ಬಂದಿತ್ತು. ಅವಳ ಕಣ್ಣುಗಳು ಅರಳಿತು !

ಸಂದರ್ಶನ ನಾಳೆ ಬೆಳಿಗ್ಗೆ ! ಸಂಪಿಗೆ ಪುರದ ಎಡತೊರೆ ಮನೆತನದ ಬಂಗಲೆಗೆ ಬೆಳಿಗ್ಗೆ ಹತ್ತು ಘಂಟೆಗೆ ಬರಬೇಕೆಂದು ಸೂಚಿಸಲಾಗಿತ್ತು !

ಗೆಳತಿ ಮೀನ ನೆನಪಾದಳು. ಅವಳಿಗೆ ವಿಷಯವನ್ನು ತಿಳಿಸಿರಲಿಲ್ಲ. ಇದನ್ನು ತಿಳಿದರೆ ಮೀನ ಯಾವ ರೀತಿ ಪ್ರತಿಕ್ರಿಯೆ ನೀಡಬಹುದು !

ರೇವತಿಗೆ ನಗು ಬಂದಿತು ! ಒಂದು ವೇಳೆ ಮೀನ ಸಹ ಅಪ್ಲಿಕೇಷನ್ ಹಾಕಿದ್ದರೆ ಇಬ್ಬರೂ ಸಹ ಪ್ರತಿಸ್ಪರ್ಧಿಗಳಾಗುತ್ತೇವೆ !

ಒಂದು ವೇಳೆ ಮಹಾಲಿಂಗ ನನ್ನ ಸೌಂದರ್ಯಕ್ಕೆ ಮರುಳಾಗಿ ನನ್ನನ್ನು ಆಯ್ಕೆ ಮಾಡಿದರೆ !

ನಾನು ತಿರಸ್ಕರಿಸುತ್ತೇನೆ !

ನಾನೇಕೆ ಈ ಹುಂಬನನ್ನು ಮದುವೆಯಾಗಲಿ !

ಅವನಿಗೆ...ಐ ಮೀನ್ ಆ ಮದುವೆಯ ಗಂಡಿಗೆ ನಾನು ಉತ್ತರವನ್ನೇ ಕೊಡದಿದ್ದರಾಯಿತು !

ಹಳ್ಳಿ ಹುಂಬನನ್ನು ಆಟ ಆಡಿಸೋಣ ! ರೇವತಿಗೆ ಗೊತ್ತಿರಲಿಲ್ಲ! ಭಯಾನಕ ವಿಚಿತ್ರ ಪ್ರಸಂಗಗಳು ಅವಳನ್ನು ಎಂತಹ ಪರಿಸ್ಥಿತಿಗೆ ತರುತ್ತದೆ ಎಂದು !

ಜೀವನ ಹುಡುಗಾಟ ಅಲ್ಲ !

ಅದರ ಅರಿವು ಅವಳಿಗೆ ಆಗಲೇಬೇಕು !

* * *

ಮಾರನೆಯ ಬೆಳಿಗ್ಗೆ ! ರೇವತಿ ಬೇಗ ಎದ್ದು ಆಕರ್ಷಕವಾಗಿ ಕಾಣುವಂತೆ ಮೇಕಪ್ ಮಾಡಿಕೊಂಡಳು. ರೇವತಿ ಸಹಜ ಸುಂದರಿ !

ಈಗ ಅವಳ ಸೌಂದರ್ಯಕ್ಕೆ ಹೊಸ ಕಳೆ ! ನೇರಳೆ ಬಣ್ಣದ ಕೆಂಪು ಬಾರ್ಡರಿನ ಮೈಸೂರಿನ ಸಿಲ್ಕ್ ಸೀರೆಯನ್ನು ಉಟ್ಟು ಮಲ್ಲಿಗೆ ಕನಕಾಂಬರ ಮುಡಿದಿದ್ದಳು !

ಮೇಕಪ್‌ನ ಅಗತ್ಯ ಇರಲಿಲ್ಲ !

ಅವಳು ಸಹಜ ಸುಂದರಿ !

ರಸಲೇಪನದ ಮುದ್ದಾದ ತುಟಿಗಳು !

ಕಾಂತಿಯುಕ್ತ ಚಂಚಲ ನೇತ್ರಗಳು !

ಯೌವ್ವನ ಪೂರಿತವಾದ ಆಕರ್ಷಕ ಮೈಸಿರಿಯೇ ಅವಳ ಸೌಂದರ್ಯದ ಪ್ಲಸ್ ಪಾಯಿಂಟ್.

ಪ್ರಯಾಣ ಪ್ರಾರಂಭವಾಯಿತು. ಮೈಸೂರಿನಿಂದ ಸಂಪಿಗೆಪುರಕ್ಕೆ ಕೇವಲ ಎರಡು ಗಂಟೆಗಳ ಪ್ರಯಾಣ ! ಆದರೆ ರಸ್ತೆ ಸರಿ ಇರಲಿಲ್ಲ !

ರೇವತಿಗೆ ತನ್ನ ಗೆಳತಿ ಮೀನಳ ಮನೆಯಲ್ಲಿ ಎರಡು ದಿವಸಗಳು ಉಳಿಯಬೇಕೆಂಬ ಆಸೆಯಿತ್ತು !

ಸೂಟ್‌ಕೇಸ್‌ನಲ್ಲಿ ಅಗತ್ಯ ಬಟ್ಟೆಗಳಿತ್ತು! ರೇವತಿ ಕೂಲಿಂಗ್ ಧರಿಸಿ ಕೈಯಲ್ಲಿ ಯಾವುದೋ ಪತ್ರಿಕೆಯನ್ನು ಹಿಡಿದು ಬಸ್ಸಿನಲ್ಲಿ ಕುಳಿತ್ತಿದ್ದಾಳೆ.

ಬಸ್ಸಿನಲ್ಲಿದ್ದ ಹಳ್ಳಿಯ ಮಂದಿ ಇವಳನ್ನು ಕಣ್ಣರಳಿಸಿ ಬೆರಗಾಗಿ ನೋಡುತ್ತಿದ್ದಾರೆ.

ರೇವತಿಯ ಸೌಂದರ್ಯ ಹಾಗಿತ್ತು !

ಯಾರಿವಳು ? ಒಳ್ಳೆಯ ಸಿನಿಮಾ ಹೀರೊ

---

ಇಲ್ಲಿವರೆಗೆ...............

ಸಂಪಿಗೆಪುರದ ಬಗ್ಗೆ ಪತ್ರಿಕೆಗಳಲ್ಲಿ ಬಂದಿರುವ ಎರಡು ಸುದ್ದಿಗಳನ್ನು ರೇವತಿ ಓದುತ್ತಾಳೆ. ಇವಳ ಗೆಳತಿ ಮೀನ ಸಹ ಅದೇ ಊರಿನಿಂದ ಆಹ್ವಾನಿಸಿ ಪತ್ರ ಬರೆದಿರುತ್ತಾಳೆ. ಸಂಪಿಗೆಪುರದ ಶ್ರೀಮಂತ ಯುವಕನಿಗೆ ವಧು ಬೇಕಾಗಿದೆ ಎಂಬ ಜಾಹೀರಾತನ್ನು ಓದಿ ರೇವತಿ ಆಸಕ್ತಿವಹಿಸುತ್ತಾಳೆ. ತಾನು ಸಹ ಅರ್ಜಿಯನ್ನು ಹಾಕಲು ನಿರ್ಧರಿಸುತ್ತಾಳೆ.

ಮುಂದೆ ಓದಿ............

ಯಿನ್ ತರಹ ಕಾಣುತ್ತಿದ್ದಾಳಲ್ಲ ಎಂದು ಕೊಂಡರು ಹಳ್ಳಿಯವರು.

ಮಣ್ಣಿನ ರಸ್ತೆ !

ಉಬ್ಬು, ತಗ್ಗುಗಳ ಹಾದಿ ! ಆದರೆ ಕಾಡಿನ ಸೌಂದರ್ಯ ಅವಳನ್ನು ಆಕರ್ಷಿಸಿತ್ತು. ರಸ್ತೆಯ ಎಡಬಲಗಳಲ್ಲಿ ಗಗನ ಚುಂಬಿ ವೃಕ್ಷಗಳು !

ಗುಡ್ಡಗಳು...ತೊರೆಗಳು !

ಪ್ರಕೃತಿ ಮೈ ತಳೆದು ನರ್ತಿಸುತ್ತಿದ್ದರೆ ಎಂತಹವರನ್ನು ಸಹ ಆಕರ್ಷಿಸುತ್ತದೆ.

ಇವಳ ಪಕ್ಕದಲ್ಲಿ ಜಾಗ ಖಾಲಿಯಿದ್ದ ಕಾರಣದಿಂದ ಹಳ್ಳಿಯ ಮನುಷ್ಯನೊಬ್ಬ ಅವಳ ಪಕ್ಕದಲ್ಲಿ ಕುಳಿತನು.

ಕೊಳೆಯ ಪಂಚೆ, ಅಂಗಿ !

ಕುರುಚಲುಗಡ್ಡ !

ತಲೆಯ ಕೂದಲೆಲ್ಲಾ ಬೆಳ್ಳಗಾದ ಆ ಮುದುಕ ರೇವತಿಯನ್ನು ನೋಡಿದನು. ಅವನ ಕಣ್ಣುಗಳು ಕೆಂಡದಂತೆ. ನೋಟದಲ್ಲಿ ತೀಕ್ಷ್ಣತೆ ಇದೆ !

ರೇವತಿ ಬೆಚ್ಚಿಬಿದ್ದಳು.

'ಯಾವೂರಿಗೆ ಹೋಗ್ತಾ ಇದ್ದಿಯ ?' ರೇವತಿ ಮುಖ ಸಿಂಡರಿಸಿದಳು. ಯಾಕೆ ಅಂದರೆ ಮುದುಕನ ಬಾಯಿಂದ ಬೀಡಿಯ ಗಬ್ಬು ವಾಸನೆ ಬರುತ್ತಿತ್ತು.

'ಸಂಪಿಗೆ ಪುರಕ್ಕೆ.'

'ಅಲ್ಲಿ ಯಾರನ್ನು ನೋಡಲು ?'

'ಎಡತೊರೆ ಶ್ರೀಮಂತರ ಮನೆಗೆ.'

ಬಸ್ಸಿನಲ್ಲೇ ಇದ್ದ ಮತ್ತೊಂದು ವ್ಯಕ್ತಿ ನಗುತ್ತಾ 'ಓ...ನೀನು ಪತ್ರಿಕೆ ಸುದ್ದಿ ಓದಿ ಮದುವೆಯಾಗಲು ಬಂದಿರೋ ಹೆಣ್ಣು.'

ರೇವತಿ ತಲೆಯಾಡಿಸಿದಳು.

ಮುದುಕ ಇವಳನ್ನು ಕೆಕ್ಕರಿಸಿಕೊಂಡು ನೋಡುತ್ತಾ 'ಯಾಕಮ್ಮ ನಿನಗೆ ನಿಮ್ಮೂರಿನಲ್ಲಿ ಗಂಡು ಸಿಗಲಿಲ್ಲವೇ'

ರೇವತಿಗೆ ಕೋಪ ಬಂದಿತು. ತಲೆಹರಟೆ ಮುದುಕ ಎಂದು ಗೊಣಗಿಕೊಂಡು ಸುಮ್ಮನಾದಳು.

ಅದೇ ಮುದುಕ 'ನಿನಗೆ ಬದುಕಬೇಕು ಅಂತ ಆಸೆ ಇದ್ದರೆ ಇಲ್ಲೇ ಇಳಿದು ಮುಂದಿನ ಬಸ್ಸನ್ನು ಹಿಡಿದು ಊರಿಗೆ ವಾಪಸ್ ಹೋಗಿಬಿಡು.'

ರೇವತಿಗೆ ಭಯವಾಯಿತು ಆದರೂ ಸಹ 'ತಾತ...ಅದ್ಯಾಕೆ ಈ ರೀತಿ ಹೆದರಿಸುತ್ತಿದ್ದೀರಾ'

'ಹೆದರಿಸುತ್ತಿಲ್ಲ ಎಚ್ಚರಿಸುತ್ತಿದ್ದೇನೆ.'

'ಅಂದರೆ...ಅಂದರೆ...' ಮುದುಕ ಗಡ್ಡ ಕೆರೆದುಕೊಳ್ಳುತ್ತಾ ಸಂಪಿಗೆಪುರದಲ್ಲಿ ದೊಡ್ಡ ಹುತ್ತ ಇದೆ. ಭಯಂಕರ ವಿಷ ಸರ್ಪಗಳಿವೆ. ಅದರ ಜೊತೆ ಎಡತೊರೆ ಮನೆಯೇ ಮಹಾ ಹುತ್ತ ! ಆ ಮನೆಯಲ್ಲಿರೊ ಪ್ರತಿಯೊಬ್ಬರೂ ಸಹ ಹುತ್ತದಲ್ಲಿರೋ ಹಾವುಗಳಂತೆ ! ಅದರಲ್ಲೂ ನೀನು ಮದುವೆಯಾಗಲು ಹೊರಟಿರುವ ಮಹಾಲಿಂಗ ಮಹಾ ವಿಷಸರ್ಪ !'

ರೇವತಿ ಭಯದಿಂದ ನಡುಗಿದಳು.

ಮುದುಕ ಗಂಭೀರವಾಗಿ 'ಮಹಾಲಿಂಗ ಕಾಳಿಂಗ ಸರ್ಪ ! ಹತ್ತಿರ ಹೋದರೆ ಹೆಡೆ ಬಿಚ್ಚಿ ಹೊಡೆಯುತ್ತಾನೆ !'

ನಿಜ...ಮುದುಕ ಹೇಳಿದ್ದು ನಿಜ !

ಮಹಾಲಿಂಗ ವಿಷಸರ್ಪ !

[ಸಶೇಷ]

## ಶುಭ ವಿವಾಹ

ಮಡಿಕೇರಿ ನಿವಾಸಿ, ವಿನೋದ್ ಮೆಡಿಕಲ್ಸ್‌ನ ಮಾಲಿಕರಾದ ಅಂಬೆಕಲ್ಲು ಕುಶಾಲಪ್ಪನವರ ಮಗ ಜೀವನ್ ಮತ್ತು ದಿ॥ ಕೆ. ಎನ್. ಹರಿಯಪ್ಪರವರ ಮಗಳು ರಜನಿಯವರ ವಿವಾಹವು ತಾ॥ 7–3–99 ರಂದು ಮಡಿಕೇರಿಯ ಕೆಳಗಿನ ಗೌಡ ಕಲ್ಯಾಣ ಮಂಟಪದಲ್ಲಿ ವಿಜೃಂಭಣೆಯಿಂದ ನಡೆಯಿತು.

## ಚುಟುಕಗಳು

ಭೇಟಿ ಆಕಸ್ಮಿಕ
ಅಗಲುವಿಕೆ ಅನಿವಾರ್ಯ
ನೆನಪು ಮಾತ್ರ ಚಿರಸ್ಮರಣೀಯವಾಗಿರಲಿ
ಒಡಿದಾಗ ಕಲ್ಲು ಶಿಲ್ಪಿಯಾಗಿ,
ನುಡಿದಾಗ ಮಾತು ಗಾನವಾಗಿ
ಬರೆತ ಅಕ್ಷರ ಕಾವ್ಯವಾಗಿ
ನೆನೆದಾಗ ನನ್ನ ನೆನಪಿರಲಿ.

❁ ❁ ❁

ಮನಸ್ಸು ಮೃದುವಾಗಿರಲಿ
ಮಾತು ಪ್ರೀತಿಯಿಂದಿರಲಿ
ಪ್ರೀತಿ ಶಾಶ್ವತವಾಗಿರಲಿ
ಕೊಡಗು ಸಂಗಾತಿಯನ್ನು ಮರೆಯದಿರಿ

❁ ❁ ❁

ಗಿಣಿ ಇರುವುದು ಪಂಜರದಲ್ಲಿ
ಪಂಜರ ಇರುವುದು ಅರಮನೆಯಲ್ಲಿ
ಅರಮನೆ ಇರುವುದು ಮೈಸೂರಿನಲ್ಲಿ
ಕೊಡಗು ಸಂಗಾತಿ ಇರುವುದು
ಗೌಡರ ಮನದಲ್ಲಿ.

❁ ❁ ❁

ತಾಯಿ ಕೊಟ್ಟ ಜನ್ಮವನ್ನು
ತಂದೆ ಕೊಟ್ಟ ಪ್ರೀತಿಯನ್ನು
ಗುರುವು ಕಲಿಸಿಕೊಟ್ಟ ವಿದ್ಯೆಯನ್ನು
ಎಂದೆಂದಿಗೂ ಮರೆಯದಿರಿ.

❁ ❁ ❁

ಹತ್ತಾರು ಬಂಡೆಗಳ ಮೇಲೆ
ಕೆತ್ತುವ ಹೆಸರನ್ನು ಒಂದೇ
ಪವಿತ್ರವಾದ ಹೃದಯದಲ್ಲಿ ಕೆತ್ತಿ
ಅದೇ ನಿಮ್ಮ ನಿಜವಾದ ಪ್ರೀತಿ.

— ಪೊರೆಯನ ಸುರೇಖ ಸುಂದರಿ,
ಕುಯ್ಯಂಗೇರಿ.

❁ ❁ ❁ ❁ ❁ ❁

**ಕೊಡಗು ಸಂಗಾತಿ ಪತ್ರಿಕೆಗೆ ಇಂದೇ ಚಂದದಾರರಾಗಿ**

# ಇಂದಿನ ಯುವ ಪೀಳಿಗೆ ಸೋಮಾರಿಗಳೇ?

ಅಂದಿನ ಕಾಲ ಇಂದಲ್ಲ, ಇಂದಿನ ಕಾಲ ನಾಳೆ ಅಲ್ಲ. ನಾಳೆಯ ಕಾಲ...? ಈ ಬಗ್ಗೆ ಪ್ರತಿಯೊಬ್ಬ ಪ್ರಜ್ಞಾವಂತ ಚಿಂತಿಸುತ್ತಾನೆ. ಹುಟ್ಟನ್ನು ಬಲ್ಲವನಾರು 'ಸಾವು ತಪ್ಪಿದಲ್ಲ', ಈ ಹುಟ್ಟು ಸಾವುಗಳ ಮಧ್ಯೆ ಜೀವನಪರ್ಯಂತ ಅದೆಷ್ಟೊ ನೋವು ನಲಿವು ಕಷ್ಟ ಸುಖಗಳ ಅನುಭವದ ಬಂಡಿ ಹಾದು ಹೋಗುತ್ತದೆ. ಹುಟ್ಟಿದವನಿಗೆ ಹುಲ್ಲು ಕೊಡುವವನಿದ್ದಾನೆ. ಎಂಬ ನಾಣ್ಣುಡಿ ಇಂದಿನ ಕಾಲದಲ್ಲಿ ಎಷ್ಟರ ಮಟ್ಟಿಗೆ ಸಂದೂಗುವುದೆಂಬುದನ್ನು ಖಚಿತವಾಗಿ ಹೇಳಲಸಾಧ್ಯವಾದ ಸಂಗತಿ.

ಸುಮಾರು ಅರ್ಧಶತಮಾನಗಳ ಹಿಂದಿನವರೆಗೆ ಕೊಡಗಿನಲ್ಲಿ ಕುಟುಂಬದ ಸಾವಿರಾರು ಎಕರೆ ಜಮೀನುಗಳು ರೂಢಿಗೊಳಿಸದೆ ಪಾಳುಬಿದ್ದಿದ್ದವು. ಅಂದಿನ ಕಾಲಕ್ಕೆ ಆಸ್ತಿಗೊಬ್ಬ ಮಗ, ಆರತಿಗೊಬ್ಬ ಮಗಳು ಎಂಬ ನಾಣ್ಣುಡಿ ಅಷ್ಟೊಂದು ಸಮಂಜಸಕರವಾಗಿ ಕಂಡುಬರುತ್ತಿರಲಿಲ್ಲ. ಕುಟುಂಬದ ಹಿರಿಯವನಿಗೆ

ಬೈತಡ್ಕ ಎ. ಬೆಳ್ಯಪ್ಪ, ಮಡಿಕೇರಿ

ಮರ್ಯಾದೆ ದೊರೆಯುತ್ತಿದ್ದ ಆ ಕಾಲ ಶಿಸ್ತು, ಒಗ್ಗಟ್ಟು, ಪ್ರೀತಿ ವಾತ್ಸಲ್ಯಗಳಿಗೆ ಅರ್ಥಮಾಡಿಕೊಟ್ಟಿತ್ತು. ವಿದ್ಯೆಗೆ ಹೆಚ್ಚಿನ ಆದ್ಯತೆ ಇರದಿದ್ದರೂ ಬದುಕಲು ತೊಂದರೆಯಿರಲಿಲ್ಲ. ಬ್ರಿಟಿಷರ ಕಾಲದಲ್ಲಿ ನಾಲ್ಕಕ್ಷರ ಇಂಗ್ಲಿಷ್ ಕಲಿತವನ ಕುಟುಂಬ ಇಂದೂ ಶ್ರೀಮಂತ ಕುಟುಂಬವಾಗಿಯೇ ಇದೆ. ಅಂದು ಜೀವನದಲ್ಲಿ ಶಿಸ್ತನ್ನು ಅಳವಡಿಸಿ ದೃಢನಂಬಿಕೆಯಿಟ್ಟು ಭೂಮಿಯಲ್ಲೇ ದುಡಿಯಲಿ ಅಥವಾ ಉದ್ಯೋಗವನ್ನೇ ಅವಲಂಭಿಸಿಕೊಂಡು ಬಂದಿರಲಿ ಆ ಕುಟುಂಬದವರು ಇಂದೂ ನೆಮ್ಮದಿಯ ಜೀವನವನ್ನು ಸಾಗಿಸುತ್ತಿದ್ದಾರೆ.

ಆದರೆ ಇಂದಿನ ಯುವ ಜನಾಂಗವನ್ನು ಸೋಮಾರಿಗಳೆಂದು ಹೇಗೆ ಹೇಳಬೇಕೊ ತಿಳಿಯದು. ಅವಿಭಾಜ್ಯ ಕುಟುಂಬದ ಆಡಳಿತದಿಂದ ಹೊರಬಂದು ಅಂದು ಸಾವಿರಾರು ಎಕರೆ ಇದ್ದ ಆಸ್ತಿ, ಹತ್ತಾರು ಎಕರೆ ಸಹ ಇಲ್ಲದಂತಹ ಇಂದಿನ ಮಿತ ಕುಟುಂಬದಲ್ಲಿರುವ ಮಕ್ಕಳಿಗೆ ಕರ್ತವ್ಯ ಪ್ರಜ್ಞೆ ಇದ್ದರೂ ಆದ್ಯ ಕಾರಣರಾಗಿ ಅವರ ತಂದೆ ತಾಯಂದಿರುಗಳೇ ಅಂತಹ ಯುವ ಪೀಳಿಗೆಯನ್ನು ಸೋಮಾರಿಗಳನ್ನಾಗಿ ಮಾಡಿದೆ ಎಂದರೆ ತಪ್ಪಾಗಲಾರದು ಸಮಯ ಮತ್ತು ಕರ್ತವ್ಯ ಪ್ರಜ್ಞೆಗಳ ಅರಿವು ಅವರಲ್ಲಿ ಮೂಡಿಸದೆ ಗಿಡವಾಗಿದ್ದ ಮಗು ಮರವಾಗಿ ಬೆಳೆಯುವ ಹಂತಕ್ಕೆ ತಲುಪುವಾಗ ಪಶ್ಚಾತ್ತಾಪ ಪಡುತ್ತಾ ಅವರು ಪ್ರಗತಿ ಪಥದಲ್ಲಿ ಕುಂಠಿತರಾಗಿದ್ದಾರೆಂದರೆ ಹೇಗೆ ? ಸೇನೆಗಳಿಗೆ ಸೇರ್ಪಡೆಯಾಗುವ ವಿಚಾರದಲ್ಲಿ ಆಳವಾದ ತಿಳುವಳಿಕೆ ಬೇಕು. ಸೇನೆಯ ಸೇರ್ಪಡೆಯಲ್ಲಿ ರಾಜಕೀಯ ಇರಬಹುದು. ನಾನು 1964 ರಲ್ಲಿ ವಾಯುಸೇನೆಗೆ ಸೇರ್ಪಡೆಯಾದಾಗ ಯಾವ ರಾಜಕೀಯ ಇರಲಿಲ್ಲ. ಆದರೆ ಇಂದು ನನ್ನ ಮಗನಿಗೆ ನನಗಿಂತ ಎಲ್ಲಾ ಮಟ್ಟದಲ್ಲಿ ನನ್ನನ್ನು ಮೀರುವ ಗುಣಗಳಿದ್ದರೂ ಸೇನೆಗೆ ತನ್ನನ್ನು ಸೇರ್ಪಡೆ ಮಾಡಿಕೊಳ್ಳಲಾಗಲಿಲ್ಲ. ಸತತ ಪ್ರಯತ್ನವ ಮಾಡು ಮನವೆ ಎಂಬಂತೆ ಅದರಹಿಂದೆ ಬಿದ್ದರೆ ಪ್ರಾಯದ ಮಿತಿ ಬಿಡುತ್ತದೆಯೆ ? ಹಸಿವು ಇದ್ದರೆ ತಾನೆ ಊಟ ಸೇರುವುದು. 1971ರ ನಂತರ ಸೇನೆಗಳಿಗೆ ಸೇರಿದವರಿಗೆ ಯುದ್ಧ ಕಾಲದ ಅನುಭವ ಆಗದೆ ನೆಮ್ಮದಿಯ ಸೇನೆಯ ಜೀವನ ಸಾಗಿದೆ ಸರಕಾರಕ್ಕೂ ಹಸಿವೆ ಇಲ್ಲ. ಈ ವೈಜ್ಞಾನಿಕತೆಯ ಸಾಧನೆಯು ಆ ಮಟ್ಟದಲ್ಲಿರುವಾಗ ನಮ್ಮ ಯುವ ಪೀಳಿಗೆಗೆ ಸೇನೆಗೆ ಸೇರ್ಪಡೆಯಾಗಲು ಸಂದರ್ಭವಾದರೂ ಎಲ್ಲಿಂದ ಬರಬೇಕು? ಕನ್ನಡಾಂಬೆ ಭಾರತಮಾತೆಯರ ಮಕ್ಕಳಾಗಿ ಸಂಸಾರದಲ್ಲಿ ಹಣದ ಕೊರತೆ ಮತ್ತು ಬದುಕಲು ಜೀವನಕ್ಕೆ ಕನ್ನಡ ಭಾಷೆಯಾಗಲಿ ಹಿಂದಿಭಾಷೆಯಾಗಲಿ ಖಂಡಿತವಾಗಿ ಸಹಕಾರಿಯಾಗುವುದಿಲ್ಲ. ಮೀಸಲಾತಿಯ ಪರಿಧಿಯಲ್ಲಿನಮ್ಮ ಕನ್ನಡಾಂಬೆಯಾಗಲಿ ಭಾರತಾಂಬೆಯಾಗಲಿ ಕನಿಕರ ತೋರಿಸರು. ಯುವ ಪೀಳಿಗೆ ತಮ್ಮದೇ ಆದ ಬುದ್ಧಿ ಶಕ್ತಿ ಪರಿಜ್ಞಾನವನ್ನು ಚೆನ್ನಾಗಿ ಗಮನದಲ್ಲಿಟ್ಟುಕೊಂಡು ಕರ್ತವ್ಯ ಪ್ರಜ್ಞೆಯೊಂದಿಗೆ ಧುಮುಕಬೇಕು. ಇಂಗ್ಲಿಷ್‌ನ ಪ್ರವೀಣತೆಯನ್ನು ಚೆನ್ನಾಗಿ ಪಡೆದರೆ ಎಲ್ಲಿ ಬೇಕಾದರೂ ಚೆನ್ನಾಗಿ ದುಡಿದು ಹಣ ಸಂಪಾದಿಸಬಹುದು. ಮಾರ್ಚ್ ತಿಂಗಳ ಮೊದಲ ಪಾಕ್ಷಿಕ ಸಂಚಿಕೆಯ "ನಿಮ್ಮ ಪತ್ರಗಳು" ಕಾಲಂನಲ್ಲಿ ಮುಖ್ಯ ಬರಹಗಾರರಾದ ಶ್ರೀ ಚೇಂದ್ರಿಮಾಡ ಗ. ಮುತ್ತಪ್ಪನವರು ಸೇನೆಗಳಿಗೆ ಯುವಕರ ಸೇರ್ಪಡೆ ಕುಂಠಿತವಾಗಿದೆಯೆ ಎಂಬ ಸಂಪಾದಕೀಯಕ್ಕೆ ಪ್ರತಿಕ್ರಿಯೆಯಾಗಿ ತಮ್ಮ ಅನಿಸಿಕೆಗಳನ್ನು ಚೆನ್ನಾಗಿ ಹಂಚಿಕೊಂಡಿದ್ದಾರೆ.

ಹಿಂದಿನ ಕಾಲದಲ್ಲಿ ಕಿರಿಯರು ಹಿರಿಯರ ಮಾತನ್ನು ಮೀರಿ ನಡೆಯುವಂತಿರಲಿಲ್ಲ. ಇಂದಿನ ಯುವ ಜನಾಂಗವನ್ನು ತಿದ್ದಿಕೊಂಡೊಯ್ಯುವುದು ಅವರ ತಂದೆ ತಾಯಂದಿರುಗಳಿಗೆ ಅಥವಾ ಸಮಾಜಕ್ಕೆ ಮೀರಿದ ವಿಚಾರವಿರಬಹುದು. ಶ್ರೀಮಂತನಲ್ಲದಿದ್ದರೂ ಶ್ರೀಮಂತನ ಜೀವನವನ್ನು ಯುವ ಪೀಳಿಗೆಗೆ ಕಲಿಸಿಕೊಟ್ಟವನಾದರೂ ಯಾರು ? ತನ್ನ ಜೀವನದುದ್ದಕ್ಕೂ ಮುಂದಿನ ಯುವ ಪೀಳಿಗೆಗೆಂದು ಸಂಪಾದನೆ ಕೂಡಿಟ್ಟೇ ಅವರಿಗೆ ಸೋಮಾರಿತನ ಹಾದಿಯನ್ನು ಹಿಡಿಸಿರುವುದನ್ನು

[13ನೇ ಪುಟ ನೋಡಿ]

# ಮನಸ್ಸಿನ ಬಗ್ಗೆ ಕೆಲವು ಮಾಹಿತಿಗಳು

**ಮನಸ್ಸು ಎಲ್ಲಿದೆ ?**

ನಮ್ಮ ಮನಸ್ಸು ನಮ್ಮ ಮಿದುಳಿನಲ್ಲಿದೆ. ಮಿದುಳಿನ ವಿವಿಧ ಭಾಗಗಳು ಮನಸ್ಸಿನ ವಿವಿಧ ಕೆಲಸ ಚಟುವಟಿಕೆಗಳನ್ನು ನಿಯಂತ್ರಿಸಿ ನಿರ್ದೇಶಿಸುತ್ತವೆ. ಉದಾಹರಣೆಗೆ ಮಿದುಳಿನ ಮುಂಭಾಗ ನಮ್ಮ ಆಲೋಚನೆ, ವಿಶ್ಲೇಷಣೆ, ಸಾಮಾಜಿಕ ಚಿಂತನೆ ನಡವಳಿಕೆಗಳಿಗೆ ಕಾರಣವಾದರೆ, ಮಿದುಳಿನ ಕಪೋಲ ಭಾಗ ಧ್ವನಿ, ವಾಸನೆ, ರುಚಿಗಳ ವಿಶ್ಲೇಷಣೆ ಮತ್ತು ಅವುಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು, ಈ ಕೆಲಸಗಳನ್ನು ಮಾಡುತ್ತದೆ. ಮಿದುಳಿನ ಮಧ್ಯಭಾಗ ಲಿಂಬಿಕ್ ವ್ಯವಸ್ಥೆಯು ಆಹಾರ ಸೇವನೆ, ನಿದ್ರೆ, ಭಾವನೆಗಳನ್ನು ಪ್ರಚೋದಿಸಿದರೆ ಮಿದುಳಿನ ಮೇಲ್ಮೈ ಅವನ್ನು ನಿಯಂತ್ರಿಸುತ್ತದೆ. ಇಡೀ ಮಿದುಳಿನ ಮೇಲ್ಮೈ ನಮ್ಮ ಬುದ್ಧಿಮತ್ತೆ ಮತ್ತು ವಿವಿಧ ಕೌಶಲಗಳನ್ನು ಪ್ರದರ್ಶಿಸಲು ನೆರವಾಗುತ್ತದೆ.

**ಮನಸ್ಸಿನ ಭಾಗಗಳು ಯಾವುವು ?**

ಮನಸ್ಸಿನ ಭಾಗಗಳ ಬಗ್ಗೆ ಚಿಂತಿಸಿ, ಸಂಶೋಧನೆ ಮಾಡಿದವರು ಸಿಗ್ಮಂಡ್ ಫ್ರಾಯ್ಡ್. ಆತನ ಪ್ರಕಾರ ಮನಸ್ಸಿನಲ್ಲಿ ಮೂರು ಭಾಗಗಳಿವೆ.

i] ಇಡ್ : ಇದು ಹುಟ್ಟುತ್ತಲೇ ನಮ್ಮಲ್ಲಿ ಕಂಡು ಬರುವ ಭಾಗ. ನಾವು ಬದುಕುಳಿಯಲು ನಮ್ಮ ವಂಶಾಭಿವೃದ್ಧಿ ಮಾಡಲು, ಅತ್ಯಗತ್ಯವಾದ ಪ್ರಾಥಮಿಕ ಬಯಕೆಗಳಾದ ಹಸಿವು, ನೀರಡಿಕೆ, ಕಾಮ ಮತ್ತು ಖುಷಿಪಡುವ ಅಭಿಲಾಷೆಗಳನ್ನು ಪೂರೈಸಿಕೊಡುವುದೇ ಇಡ್‌ನ ಕೆಲಸ. ಸ್ವಾಭಾವಿಕವಾಗಿ 'ಇಡ್' ಬಹಳ ಬಲಶಾಲಿ ಮತ್ತು ನಮ್ಮ ನಡೆ–ನುಡಿಗಳನ್ನು ನಿರ್ದೇಶಿಸುವುದರಲ್ಲಿ ಪ್ರಮುಖ ಪರಿಣಾಮಕಾರಿ ಪಾತ್ರವಾಗಿಸುತ್ತದೆ.

ii] ಈಗೋ : ಇದು ವಾಸ್ತವಿಕತೆಯನ್ನು ಅರ್ಥ ಮಾಡಿಕೊಂಡು ಇಡ್ ಅನ್ನು ಹತೋಟಿಯಲ್ಲಿಡಲು ಪ್ರಯತ್ನಿಸುವ ಭಾಗ. ಇಡ್ ಬಲಗೊಂಡಷ್ಟೂ ವ್ಯಕ್ತಿ ಹೆಚ್ಚು ಪ್ರೌಢನಾಗುತ್ತಾನೆ.

iii] ಸುಪರ್ ಈಗೋ : ನ್ಯಾಯ–ಅನ್ಯಾಯ, ಧರ್ಮ–ಅಧರ್ಮ, ಸರಿ–ತಪ್ಪುಗಳ ವಿವೇಚನೆ ಮಾಡಿ, ವ್ಯಕ್ತಿ ಸಾಮಾಜಿಕ–ಧಾರ್ಮಿಕ–ನೈತಿಕ ನೀತಿ ನಿಯಮಗಳನ್ನು ಪಾಲಿಸಲು ಒತ್ತಾಯಿಸುವ ಭಾಗ. ಸುಪರ್ ಈಗೋ ಬಲವಾದಷ್ಟು ವ್ಯಕ್ತಿ ಹೆಚ್ಚು ಮಾನವೀಯತೆಯಿಂದ ನಡೆದುಕೊಳ್ಳುತ್ತಾನೆ. ಅತ್ಯುನ್ನತ ಮಟ್ಟದಲ್ಲಿ ಮಹಾತ್ಮ, ಸಂತನಾಗುತ್ತಾನೆ.

ಇನ್ನೊಂದು ಸಿದ್ಧಾಂತದ ಪ್ರಕಾರ, ಮನಸ್ಸಿನಲ್ಲಿ ಜಾಗೃತ ಮನಸ್ಸು ಮತ್ತು ಸುಪ್ತ ಮನಸ್ಸು ಎಂಬ ಎರಡು ಭಾಗಗಳಿವೆ. ಜಾಗೃತ ಮನಸ್ಸಿಗೆ ಅಹಿತವನ್ನುಂಟುಮಾಡುವ ಎಲ್ಲಾ ಆಸೆ, ಅನುಭವಗಳು, ದ್ವಂದ್ವಗಳು ಸುಪ್ತ ಮನಸ್ಸಿನೊಳಕ್ಕೆ ದೂಡಲ್ಪಡುತ್ತವೆ. ಸುಪ್ತ ಮನಸ್ಸಿನಲ್ಲಿರುವ ಈ ಅಂಶಗಳು ಜಾಗೃತ ಮನಸ್ಸಿನ ಅರಿವಿಗೆ ಬರುವುದಿಲ್ಲ.

**ಗಂಡಸಿಗಿಂತ ಹೆಂಗಸಿನ ಮನಸ್ಸನ್ನು ಅರ್ಥಮಾಡಿಕೊಳ್ಳುವುದು ಹೆಚ್ಚು ಕಷ್ಟವಂತೆ ಹೌದೆ ?**

ಹಾಗೇನಿಲ್ಲ, ವ್ಯಕ್ತಿ ಗಂಡಸಾಗಲಿ, ಹೆಂಗಸಾಗಲಿ, ತನ್ನ ಮನಸ್ಸನ್ನು ತೆರೆಯದಿರಲು ನಿರ್ಧರಿಸಿದರೆ, ಯಾರಿಂದಲೂ ಆತ/ಆಕೆಯ ಮನಸ್ಸಿನಲ್ಲಿ ಏನಿದೆ ಎಂದು ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ●

ಸಂಗ್ರಹ : ಉಳುವಾರನ ಧನುಜ ಜನಾರ್ಧನ್
ಕುಶಾಲನಗರ.

---

[12ನೇ ಪುಟದಿಂದ]

ಇತ್ತೀಚಿನ ಸುಮಾರು 2 ದಶಕಗಳಿಂದ ಹೆಚ್ಚಾಗಿ ಕಾಣುತ್ತಿದ್ದೇವೆ. ಹಣ ಕೊಡಿಟ್ಟರೆ ಅವರಿಗೆ ದುಡಿಮೆಯ ಆವಶ್ಯಕತೆ ಏಕೆ ಬೇಕು ? ಆದುದರಿಂದ ಯುವ ಜನಾಂಗದ ಸೋಮಾರಿತನಕ್ಕೆ ಆದ್ಯ ಕಾರಣಕರ್ತರಾಗಿ ತಂದೆ ತಾಯಂದಿಯರೂ ಅನಂತರ ಗುರುಗಳೂ ಸಮಾಜ ಹಾಗೂ ರಾಜಕೀಯ ಗಣ್ಯರೂ ಮತ್ತು ಸರಕಾರವೂ ಪಾಲುಗಾರರಾಗುತ್ತಾರೆ.

ಇಂದಿನ ವಿಜ್ಞಾನ ಮುಂದುವರಿದ ಕಾಲದಲ್ಲಿ ಯುವ ಪೀಳಿಗೆ ಹಿಂದಿನ ಪೀಳಿಗೆಗಿಂತ ಚುರುಕು ಬುದ್ಧಿಯುವರಾಗಿದ್ದಾರೆ. ಆದರೆ ಹೆಚ್ಚಿನ ಕ್ಷೇತ್ರಗಳಲ್ಲಿ ಅವರು ತಮ್ಮ ಚುರುಕು ಬುದ್ಧಿ, ಆತ್ಮಶಕ್ತಿಗಳನ್ನು ಉಪಯೋಗಿಸಲು ತಿಳಿಯದವರಿಂದ ಕೇಳಿ ತಿಳಿದುಕೊಳ್ಳುವಷ್ಟು ತಾಳ್ಮೆ ಇಲ್ಲದಾಗಿದೆ. ಪ್ರತಿಯೊಬ್ಬರೂ ಒಡೆಯರಾದರೆ ಪ್ರಜೆಗಳಾರು ಎಂಬುದೇ ಪ್ರಶ್ನೆ. ಶಾಲಾ ಕಾಲೇಜುಗಳ ಪಾಸ್–ಫೇಲ್ ವಿದ್ಯಾಭ್ಯಾಸದ ಮಟ್ಟ ಬರೇ ಸರ್ಟಿಫಿಕೇಟ್‌ಗೋಸ್ಕರವಾಗಿದೆ. ಆದರೆ ಅದೇ ವಿದ್ಯಾಭ್ಯಾಸವನ್ನು ಮನಸ್ಸಾರೆ ಅಭ್ಯಸಿಸಿದರೆ ಅದು ಸರ್ಟಿಫಿಕೇಟ್ ಮಾತ್ರವಲ್ಲ ಬದುಕಿನ ನಂದಾದೀಪವಾಗಿ ದಾರಿಯನ್ನು ಖಂಡಿತವಾಗಿ ತೋರಿಸುವುದು. ಆದುದರಿಂದ ಈ ಸಮಾಜದಲ್ಲಿ ಪ್ರತಿಯೊಬ್ಬನೂ ತನ್ನ ತನ್ನ ಜವಾಬ್ದಾರಿಕೆಯ ನೊಗ ಹೆಗಲಮೇಲೆ ಬೀಳುವ ತನಕ ಕಾಯದೆ ಅದಕ್ಕೆ ತಯಾರಿ ಆಗುತ್ತಿದ್ದರೆ ಒಳಿತಲ್ಲವೆ ?

[4ನೇ ಪುಟದಿಂದ ಮುಂದುವರಿದುದು]

ಒಬ್ಬರಾಗಿದ್ದಾರೆ. ಇವರು ಮಾತನಾಡುತ್ತಾ ಯಾವುದೇ ವ್ಯಕ್ತಿ ಸಾಧನೆ ಮಾಡಲು ಬಯಕೆ ಮತ್ತು ದೃಷ್ಟಿಕೋನವಿಟ್ಟು ಕೊಂಡು ಮುನ್ನುಗ್ಗಬೇಕು. ಆಗ ಜಯ ಖಂಡಿತವೆಂದರು. ಯುವಕರ ಶ್ರಮವನ್ನು ಪ್ರಶಂಸಿಸಿದ ರೇಖಾರವರು 162 ವರ್ಷಗಳ ಹಿಂದೆ ಸ್ವಾತಂತ್ರ್ಯ ಹೋರಾಟದಲ್ಲಿ ಗತಿಸಿದ ಗುಡ್ಡೆಮನೆ ಅಪ್ಪಯ್ಯಗೌಡರ ಆತ್ಮಕ್ಕೆ ಈ ಪಂದ್ಯಾಟದ ಮೂಲಕವಾದರೂ ಶಾಂತಿ ಸಿಗಲೆಂದು ಶುಭ ಹಾರೈಸಿದರು. ರಾಷ್ಟ್ರೀಯ ಫುಟ್ಬಾಲ್ ಪಟು ಚೆಪ್ಪುರನ ಅಣ್ಣಪ್ಪಕುಮಾರ್ ಇವರನ್ನು ಇದೇ ಸಂದರ್ಭದಲ್ಲಿ ಶಾಲು ಹೊದಿಸಿ ಸನ್ಮಾನಿಸಿದರು. ಅತ್ಯುತ್ತಮ ಆಟಗಾರ ಪ್ರಶಸ್ತಿಯನ್ನು ಜೆ. ಇ. ಸಿ. ತಂಡದ ಖಾದರ್ ಮತ್ತು ಅಧಿಕ ಗೋಲು ಗಳಿಸಿದ ಆಟಗಾರನ ಪ್ರಶಸ್ತಿಯನ್ನು ಅದೇ ತಂಡದ ಜಾನ್ ಪಡೆದರು. ಹಾಗೂ ಅಭಿಲಾಷ್ ತಂಡದ ಗೋಲಿ ಅತ್ಯುತ್ತಮ ಗೋಲ್‌ಕೀಪರ್ ಪ್ರಶಸ್ತಿ ಪಡೆದರು.

ಸಮಾರಂಭದ ಮೊದಲಿಗೆ ಮಡಿಕೇರಿ ಸೈಂಟ್ ಮೈಕೇಲ್ ಪ್ರಾಥಮಿಕ ಶಾಲೆಯ ಸುಮಾರು 80 ಪುಟಾಣಿಗಳು ನೀಡಿದ ಸುಗ್ಗಿ ಸುವ್ವಾಲಿ ಕುಣಿತವು ಮುಖ್ಯ ಆಕರ್ಷಣೀಯವಾಗಿತ್ತು. ಕಾರ್ಯಕ್ರಮದ ಆದಿಯಲ್ಲಿ ಕೋಡಿ ಚಂದ್ರಶೇಖರ್‌ರವರು ನೆರೆದ ಸರ್ವರನ್ನು ಸ್ವಾಗತಿಸಿದರು. ಸಾಕರ್ ಕ್ಲಬ್‌ನ ಪದಾಧಿಕಾರಿ ಕ್ರಿಸ್ಟಿಯವರ ಸಹಕಾರ ಮೆಚ್ಚುವಂತದ್ದು. ಗುಡ್ಡೆಮನೆ ರಮೇಶ್ ಕಾರ್ಯಕ್ರಮವನ್ನು ರಸವತ್ತಾಗಿ ನಿರೂಪಿಸಿದರೆ ಪಂದ್ಯದ ವೀಕ್ಷಕ ವಿವರಣೆಯನ್ನು ಕಟ್ಟೆಮಾಡಿನ ಕಟ್ಟೆಮನೆ ಸೋನಾ ರಾಮಚಂದ್ರ ಅತ್ಯುತ್ತಮವಾಗಿ ನೀಡಿ ಜನರ ಮನ ಗೆದ್ದರೆ, ಮದೆನಾಡಿನ ಮಂಡಲ ಪಂಚಾಯ್ತಿ ಅಧ್ಯಕ್ಷ ಹಾಗೂ ಮಡಿಕೇರಿಯ ಯುವ ವಕೀಲ ಹುದೇರಿ ನಾಗೇಶ್ ವಂದಿಸಿದರು. ಒಟ್ಟಾರೆ ಹುತಾತ್ಮ ಅಪ್ಪಯ್ಯಗೌಡರ ಫುಟ್ಬಾಲ್ ಪಂದ್ಯಾಟವು ಮುಂಬರುವ ವರ್ಷಗಳಲ್ಲಿ ರಾಜ್ಯ ಮಟ್ಟದಲ್ಲಿ ಪ್ರಜ್ವಲಿಸಲಿ. ಜನಾಂಗ ಜನಾಂಗದ ಬೆಸುಗೆಯಾಗಿ ಮೆರೆಯಲಿ ಎಂದು ಕೊಡಗು ಸಂಗಾತಿ ಮನಪೂರ್ತಿ ಶುಭವನ್ನು ಹಾರೈಸುತ್ತದೆ.

—ವರದಿ : ಪಟ್ಟಡ ಪ್ರಭಾಕರ್

## ಅಭಿನಂದನೆ

ಕರ್ನಾಟಕ ರಾಜ್ಯದ ಮಾಜಿ ಸಚಿವರಾದ ಸೋಮವಾರಪೇಟೆ ತಾಲ್ಲೂಕಿನ ಶ್ರೀ ಬಿ. ಎ. ಜೀವಿಜಯರವರು ಲೋಕಶಕ್ತಿ ಪಕ್ಷದ ಕರ್ನಾಟಕ ಘಟಕದ ಉಪಾಧ್ಯಕ್ಷರಾಗಿ ಆಯ್ಕೆಯಾಗಿರುವುದಾಗಿ ತಿಳಿದುಬಂದಿದೆ. ಶ್ರೀಯುತರಿಗೆ ಸಂಗಾತಿಯ ಅಭಿನಂದನೆಗಳು.

[3ನೇ ಪುಟದಿಂದ]

* ನಿಮ್ಮನ್ನು ಜನತೆ ಅಲ್ಲಿ–ಇಲ್ಲಿ ಸಭೆ ಸಮಾರಂಭಗಳಿಗೆ ಆಹ್ವಾನಿಸಿದರೆ, ಆ ಸಭೆಯಲ್ಲಿ ಏನಾದರೊಂದು ಬೇಡಿಕೆ ಇದ್ದೇ ಇರುತ್ತದೆಂಬ ಊಹೆ ನಿಮಗಿದೆಯೆ ?

ಉ : ನಿಜವಾಗಿ ಒಂದು ಮಾತು ಹೇಳುತ್ತೇನೆ. ಬಹುಪಾಲು ಸಮಾರಂಭಗಳಿಗೆ ನನ್ನನ್ನು ಕರೆಯುವ ಮೂಲ ಉದ್ದೇಶವೇ "ಬೇಡಿಕೆ ಮಂಡಿಸಲು" ಎಂದೆನಿಸುತ್ತದೆ. ಅಲ್ಲದೆ ನಾನು ಎಲ್ಲಾ ಸಮಾರಂಭಗಳಿಗೆ ಹೋಗುತ್ತೇನೆ. ಯಾಕೆಂದರೆ ಆ ಊರಿನ ಸಮಸ್ಯೆಯನ್ನು ಖುದ್ದು ನೋಡುವ ಅವಕಾಶ ನನಗೆ ಆಗ ಸಿಗುತ್ತದೆ. ಹಾಗೂ ಸಾಧ್ಯವಾದಷ್ಟು ಆ ಸಮಸ್ಯೆಯನ್ನು ಬಗೆಹರಿಸಲು ಯತ್ನಿಸುತ್ತೇನೆ. ಮುಖ್ಯವಾಗಿ ರೆವಿನ್ಯೂ ಮತ್ತು ಪೊಲೀಸ್ ಇಲಾಖೆಯದೇ ಬೇಡಿಕೆ ಹೆಚ್ಚು.

* ನೀವು ತಾಲ್ಲೂಕು ಪಂಚಾಯ್ತಿ ಸದಸ್ಯರಾಗಿದ್ದಾಗಲೋ, ಜಿಲ್ಲಾ ಪಂಚಾಯ್ತಿ ಅಥವಾ ಜಿಲ್ಲಾ ಪರಿಷತ್‌ನ ಸದಸ್ಯರಾಗಿದ್ದಾಗಲೋ ಕೈಗೊಂಡ ಅಭಿವೃದ್ಧಿ ಕೆಲಸಗಳಾವುವು ?

ಉ : ಸಾಕಷ್ಟು ಕೆಲಸ ಆಗಿದೆ. ಸಂಪಾಜೆ, ಚೆಂಬು, ಬೆಟ್ಟತ್ತೂರು, ಕಾಟಕೇರಿ ಮುಂತಾದೆಡೆ ಸಂಪರ್ಕ ರಸ್ತೆಗಳು ಹಾಗೂ ಅವುಗಳಿಗೆ ಡಾಂಬರೀಕರಣದ ವ್ಯವಸ್ಥೆಯನ್ನು ಮಾಡಿದ್ದೇನೆ. ಚೆಂಬು ಗ್ರಾಮವಂತೂ ಅಂಡಮಾನ್ ಇದ್ದಂತೆ. ಅಲ್ಲಿ ಮೊಟ್ಟ ಮೊದಲು ತೂಗು ಸೇತುವೆಯನ್ನು ಸುರತ್ಕಲ್ ಇಂಜಿನಿಯರ್ಸ್‌ರವರಿಂದ, ಲಯನ್ಸ್ ಕ್ಲಬ್ ವತಿಯಿಂದ ಮಾಡಿಸಿದ್ದೇನೆ. ಚೆಂಬು ಗ್ರಾಮಕ್ಕೆ ಸರಕಾರಿ ಶಾಲೆ ತೆರೆಯುವಂತೆ ಶ್ರಮಿಸಿದ್ದೇನೆ. ಹೀಗೆ ಹಲವಾರು ಪ್ರಮುಖ ಕೆಲಸಗಳು ನನ್ನ ನೆರವಿನಿಂದಾಗಿದೆ.

* ಜನತೆಗೆ ನಿಮ್ಮ ಹಿತನುಡಿಯೇನು ?

ಉ : ಜನತೆ ಒಂದು ವಿಚಾರವನ್ನು ಗಮನಿಸಬೇಕು. ಎಲ್ಲಾ ಕೆಲಸಗಳು ಜಿಲ್ಲಾ ಪಂಚಾಯ್ತಿಯೇ ಮಾಡಿಕೊಡುತ್ತದೆಂಬ ಭಾವನೆ ಬೇಡ. ನನ್ನ ಇತಿ ಮಿತಿಯಲ್ಲಿ ಎಷ್ಟು ಸಾಧ್ಯವೋ ಅಷ್ಟನ್ನು, ಅದರಲ್ಲೂ ಸರಕಾರದ ಯೋಜನೆ ಏನುಂಟೋ ಅದನ್ನು ಅಭಿವೃದ್ಧಿಪಡಿಸುವುದು ಬಹು ಮುಖ್ಯ.

* ನೀವು ಈಗ ಸಂಪೂರ್ಣವಾಗಿ ನಿಮ್ಮನ್ನು ಸಾಮಾಜಿಕ ಸೇವೆಯಲ್ಲಿ ತೊಡಗಿಸಿಕೊಂಡಿದ್ದೀರಿ. ಕೆಲಸದ ಒತ್ತಡದಿಂದಾಗಿ ನೀವು ನಿಮ್ಮ ಮನೆ ತಲುಪುವಾಗ ನಿಗದಿತ ಸಮಯ ಎಂಬುದಿಲ್ಲ. ಈ ಸಂದರ್ಭದಲ್ಲಿ ನಿಮ್ಮ ಮನೆಯವರ ಪ್ರತಿಕ್ರಿಯೆ ಏನು ?

ಉ : ಒಂದು ಜಿಲ್ಲೆಯ ಅಭಿವೃದ್ಧಿ ಕೆಲಸದಲ್ಲಿ ನನ್ನನ್ನು ತೊಡಗಿಸಿಕೊಂಡಿರುವುದು ಮನೆಯವರಿಗೆ ಚೆನ್ನಾಗಿ ಗೊತ್ತಿದೆ. ಇದರಿಂದಾಗಿ ಮನೆಯವರು ನನಗೆ ಸದಾ ಪ್ರೋತ್ಸಾಹ ಕೊಡುತ್ತಿದ್ದಾರೆ. ○

# ಸಿದ್ದಾಪುರದಲ್ಲಿ ಪತ್ರಕರ್ತರ ಸಂಘಕ್ಕೆ ಆಯ್ಕೆ



ವಿ. ಜೆ. ನರೇಂದ್ರ

ತಾ॥ 19-2-99ನೇ ಶುಕ್ರವಾರದಂದು ಜರುಗಿದ ಪತ್ರಕರ್ತರ ಸಭೆಯ ಅಧ್ಯಕ್ಷತೆಯನ್ನು ಹಿರಿಯ ಪತ್ರಕರ್ತ ಶ್ರೀ ವಿ. ಜೆ. ನರೇಂದ್ರರವರು ವಹಿಸಿ ಮಾತನಾಡಿ "ಪತ್ರಕರ್ತರ ಹಕ್ಕುಗಳು ಹಾಗೂ ಪತ್ರಿಕೋದ್ಯಮದ ಮಹತ್ವದ ಕುರಿತು ಸಂಕ್ಷಿಪ್ತವಾದ ಮಾಹಿತಿ ನೀಡಿದರು.

ಸ್ವಾಗತ ಭಾಷಣವನ್ನು ಅಂಚೆಮನೆ ಸುಧಿಕುಮಾರ್ [ಆಂದೋಲನ ಪ್ರತಿನಿಧಿ] ಮಾಡಿದರು.

ನಂತರ ನಡೆದ ಸಂಘದ ಪದಾಧಿಕಾರಿಗಳ ಆಯ್ಕೆಯಲ್ಲಿ 'ಶಕ್ತಿ' ದಿನಪತ್ರಿಕೆಯ ವರದಿಗಾರ ಹಾಗೂ ಏಜೆಂಟರಾದ ಶ್ರೀ ವಿ. ಜೆ. ನರೇಂದ್ರರವರು ಅಧ್ಯಕ್ಷರಾಗಿ ಅವಿರೋಧವಾಗಿ ಆರಿಸಿ ಬಂದರು. ಉಪಾಧ್ಯಕ್ಷ ಸ್ಥಾನವನ್ನು 'ಕನ್ನಡ ಜನ-ಅಂತರಂಗ'ದ ವರದಿಗಾರ ಶ್ರೀ ಎ. ಎಸ್. ವಾಸು, ಪ್ರಧಾನ ಕಾರ್ಯದರ್ಶಿಯಾಗಿ 'ಆಂದೋಲನ' ಪ್ರತಿನಿಧಿ ಶ್ರೀ ಅಂಚೆಮನೆ ಸುಧಿಕುಮಾರ್ ಕಾರ್ಯದರ್ಶಿಯಾಗಿ 'ಕಾಫಿಲ್ಯಾಂಡ್' ವರದಿಗಾರ ಶ್ರೀ ಅಬ್ದುಲ್‌ಖಾದರ್, ಸಹಕಾರ್ಯದರ್ಶಿಯಾಗಿ 'ಮೈಸೂರು ಮಿತ್ರ' ವರದಿಗಾರ ಶ್ರೀ ಮುಬಾರಕ್ ಹಾಗೂ ಖಜಾಂಚಿಯಾಗಿ 'ಜನವಾಹಿನಿ' ವರದಿಗಾರ ಶ್ರೀ ಗುರುದರ್ಶನ್ ಆಯ್ಕೆಗೊಂಡರು.

ಶ್ರೀ ಅಬ್ದುಲ್‌ಖಾದರ್‌ರವರ ವಂದನಾರ್ಪಣೆಯೊಂದಿಗೆ ಸಭೆ ಬರಕಾಸ್ತುಗೊಂಡಿತು. —ಸಂಗಾತಿ ವರದಿ.

# ಕುಶಾಲನಗರದಲ್ಲಿ ಗೌಡರ ಸಂತೋಷ ಕೂಟದ ಒಂದು ಅವಲೋಕನ

ತಾ॥ 14-2-99 ರಂದು ಜರುಗಿದ ಸಂತೋಷಕೂಟ ಸಮಾರಂಭವು ಬಹಳ ವಿಜೃಂಭಣೆಯಿಂದ ಜರುಗಿತು. ಕುಶಾಲನಗರದಲ್ಲಿ ನೆಲೆಸಿರುವ ಗೌಡ ಜನಾಂಗದಲ್ಲಿ ಉದ್ಯೋಗ ಮತ್ತು ನಿವೃತ್ತ ಜನರೇ ಹೆಚ್ಚಾಗಿ ನೆಲೆಸಿರುತ್ತಾರೆ. ಇವರಲ್ಲಿ ವಿದ್ಯಾಭ್ಯಾಸ ಜನಸಂಪರ್ಕ ಇಲ್ಲದಿರುವವರು ವಿರಳ. ಆದರೆ ಆಧುನಿಕತೆಯ ಬಗ್ಗೆ ಇನ್ನು ಸುಧಾರಿಸಿಕೊಳ್ಳಬೇಕಾಗಿದೆ. ಜನಸಮೂಹವೇನೋ ಬಂತು. ಬಹುತೇಕ ಹಾಜರಾಗಿದ್ದರು. ಆದರೆ ಸಮಾರಂಭ ಕಾರ್ಯಕ್ರಮ ನಡೆಯುತ್ತಿರಬೇಕಾದರೆ ಸಂಗೀತ,

ಪತ್ರಕರ್ತ : ಕುಂದುಪಜೆ ಬಸಪ್ಪ, ಕುಶಾಲನಗರ

ಸಾಂಸ್ಕೃತಿಕ ಕಾರ್ಯಕ್ರಮ ಅತಿಥಿಗಳ ಭಾಷಣಗಳಿಗೆ ಹೆಚ್ಚು ಗೌರವ ಕೊಡದೆ ಕುಳಿತಲ್ಲಿ ಹರಟೆ ಹೊಡೆಯುವುದು, ಮಕ್ಕಳನ್ನು ಆಟವಾಡಿಸುವುದು, ಅನಾವಶ್ಯಕ ಜನರುಗಳೆಲ್ಲಾ ವೇದಿಕೆಯ ಮೇಲೆ ತಿರುಗಾಡುವುದು, ಸಮಾರಂಭ ನಡೆಯುತ್ತಿರುವಾಗ ಅಡ್ಡಾಡುತ್ತಿರುವುದು ಇಂತಹ ಅಶಿಸ್ತು ಎದ್ದು ಕಂಡುಬರುತ್ತಿದ್ದು ಕುತೂಹಲದಿಂದ ನೋಡುವವರಿಗೂ ಮತ್ತು ಸ್ಪರ್ಧೆಯ ತೀರ್ಪುಗಾರರುಗಳಿಗೂ ಅಡಚಣೆ ಆಗುತ್ತಿತ್ತು.

ಕೆಲವು ವಿದ್ಯಾವಂತ ಬುದ್ಧಿವಂತರಂತೂ ವರ್ಷಕ್ಕೊಮ್ಮೆ ನಡೆಸುವಂತ ಸಮಾರಂಭಕ್ಕೆ ಅತೀ ತಡವಾಗಿ ಬರುವುದು, ಮಧ್ಯಾಹ್ನ ಊಟವಾದ ಕೂಡಲೆ ಹಿಂದಿನ ಬಾಗಿಲಿನಿಂದಲೇ ಹೊರಟುಹೋಗುವ ಸಂಪ್ರದಾಯವನ್ನು ಈಗಲೂ ಮುಂದುವರಿಸಿಕೊಂಡು ಬರುತ್ತಿರುವುದು ತುಂಬಾ ವಿಷಾದನೀಯ ವಿಚಾರ. ಮತ್ತು ಇನ್ನು ಕೆಲವರು ಶೋಕಿಗಾಗಿ ಆಗಿಂದಾಗ್ಗೆ ತಮ್ಮ ವಾಹನಗಳಲ್ಲಿ ಚಲಿಸುವುದು, ಅನಾವಶ್ಯಕವಾಗಿ ನಿಲ್ಲಿಸಿಕೊಂಡು ತೆಗೆದು ಅಡ್ಡಾಡುವುದು, ಹೋಗುವುದು ಪುನಃ ಬರುವುದು ಇದು ತಿರುಗಾಡುವ ಜನರಿಗೂ ಮತ್ತು ಶಬ್ದದ ಅಡಚಣೆಯೂ ಇನ್ನೊಂದು ತೊಂದರೆ ಸಹ ಹೌದು

ವೇದಿಕೆ ನಿರ್ಮಾಣದ ಏರ್ಪಾಡಿನಲ್ಲಿ ಹಳ್ಳಿಜನರೇ ಲೇಸೆಂದು ಕಾಣುತ್ತಿತ್ತು. ಮುಖ್ಯ ದ್ವಾರದಲ್ಲಾಗಲಿ, ವೇದಿಕೆಯಲ್ಲಾಗಲಿ ನಾಮಫಲಕವಾಗಲಿ, ಬಿತ್ತಿಪತ್ರಗಳಾಗಲಿ ಇರಲಿಲ್ಲ. ಮುಖ್ಯ ಅತಿಥಿಗಳಿಗಾಗಿ ಮತ್ತು ವೇದಿಕೆಯಲ್ಲಿರಬೇಕಾದ ಆಸನಗಳ ವ್ಯವಸ್ಥೆ ಮೇಜು, ಹೂಗುಚ್ಛ, ಹೂಕುಂಡ ಇನ್ಯಾವುದೇ ಸ್ವಾಭಾವಿಕ ಅಲಂಕಾರದ ಬಗ್ಗೆ ಗಮನಹರಿಸದೆ ಉದಾಸೀನದ ತರಾತುರಿಯಲ್ಲಿ ಏರ್ಪಡಿಸಿದಂತಿತ್ತು. ಛಾಯಾ ಚಿತ್ರಗಾರರಾಗಲಿ, ಸಮಾರಂಭಕ್ಕೆ ಆಗಮಿಸುವ ಜನಾಂಗದ ಅಪರಿಚಿತ ವ್ಯಕ್ತಿಗಳನ್ನು ಸ್ವಾಗತಿಸುವ ಸ್ವಾಗತ ಸಮಿತಿಯೂ ಇರಲಿಲ್ಲ. ದೂರದಿಂದ ಬಂದಂತಹ ಗಣ್ಯ ವ್ಯಕ್ತಿಗಳನ್ನು ಸಮಾರಂಭದ ಮೊದಲ ಸೀಟಿನಲ್ಲಿ ಕೂರಿಸುವ ಔದಾರ್ಯ ಸಹ ಇರಲಿಲ್ಲ. ಪತ್ರಕರ್ತರಿಗೆ ಪ್ರತ್ಯೇಕ ಆಸನಗಳು ಸಹ ಇರಲಿಲ್ಲ. ಆದುದರಿಂದ ಇನ್ನು ಮುಂದಾದರೂ ಬೇರೆ ಸಂಘ ಸಂಸ್ಥೆಗಳಲ್ಲಿ ಭಾಗವಹಿಸುವಾಗ ಅವರು ಏರ್ಪಡಿಸಿದ ವ್ಯವಸ್ಥೆಗಳ ಬಗ್ಗೆ ಗಮನಹರಿಸಿ ಸುಧಾರಣೆಯ ಮಾರ್ಗೋಪಾಯವನ್ನು ಅನುಸರಿಸಿ ಮುಂದಿನ ಸಮಾರಂಭದಲ್ಲಿ ತುಂಬಾ ಮೆಚ್ಚುಗೆ ವ್ಯಕ್ತಪಡಿಸುವಂತಹ ಮತ್ತು ಮೆರಗು ನೀಡುವಂತಾಗಬೇಕೆಂದು ಹಲವು ಜನರ ಅಭಿಪ್ರಾಯಗಳಾಗಿದೆ.

# ಗೌಡರ ವಿವಾಹ ಪದ್ಧತಿಯಲ್ಲಿ ಕೂಡಾವಳಿ ಸಂಪ್ರದಾಯ

ಗೌಡರ ವಿವಾಹ ಪದ್ಧತಿಯಲ್ಲಿ ಕೂಡಾವಳಿಯು ಒಂದು. ಇದು ಪುನರ್ ವಿವಾಹ, ವಿಧವಾ ಎಂದು ಹೇಳುವುದಕ್ಕಿಂತಲೂ ಭಿನ್ನವಾದುದು. ಗಂಡಾಗಲಿ ಹೆಣ್ಣಾಗಲಿ ತನ್ನ ಸಂಸಾರದ ಬಾಳಿನಲ್ಲಿ ದುರಂತ ಕಂಡು ಅವರು ಏಕಾಂಗಿಯಾದರೆ ಅವರಿಗೆ ಅಂತಹವರೇ ಆದವರೊಂದಿಗೆ ಆಗುವ ವಿವಾಹಕ್ಕೆ "ಕೂಡಾವಳಿ" ಎಂದು ಹೇಳುವರು.

ಇಲ್ಲಿ ಅವಿವಾಹಿತ ಹೆಣ್ಣನೊಂದಿಗೆ ವಿವಾಹಿತನೊಬ್ಬ ಪತ್ನಿ ವಿಯೋಗದಿಂದ ಅವನ ಯೌವ್ವನಾವಸ್ಥೆಯಲ್ಲಿ ವಿಧುರನಾದರೆ ಕನ್ಯೆ ಹೆಣ್ಣಿನೊಂದಿಗೆ ವಿವಾಹವಾಗಬಹುದು. ಹಾಗೇ ಆಗುವ ವಿವಾಹಕ್ಕೆ 'ಪುನರ್ ವಿವಾಹ' ಎಂದು ಹೇಳಬಹುದು. ಹೆಣ್ಣಿಗೆ ಇದು ಮೊದಲ ಧಾರೆ ವಿವಾಹವಾದ ಕಾರಣ ಇದನ್ನು ವಿವಾಹವೆಂದು ಪರಿಗಣಿಸುವರು. ಹಾಗೆಯೇ ಹೆಣ್ಣೊಬ್ಬಳು ಪತಿಯ ವಿಯೋಗದಿಂದ ವಿಧವೆಯಾಗಿ ಯೌವ್ವನಾವಸ್ಥೆಯಲ್ಲಿದ್ದರೆ, ಅವಿವಾಹಿತ ಗಂಡಿನೊಂದಿಗೆ ವಿವಾಹವಾಗಲಾರದು. ಕಾರಣ ಹೆಣ್ಣಿಗೆ ಎರಡನೆಯ ಧಾರೆಯಿಲ್ಲ. ಗಂಡೇ ಆಗಲಿ ಹೆಣ್ಣೇ ಆಗಲಿ ಧಾರಾ ವಿವಾಹವಾಗದೆ ಮೋಕ್ಷವಿಲ್ಲವೆಂದು ಹೇಳುವುದು ವಾಡಿಕೆ. ಪತಿಯ ವಿಯೋಗದಿಂದ ಯೌವ್ವನಾವಸ್ಥೆಯಲ್ಲಿರುವ ವಿಧವೆಯನ್ನು ತನ್ನ ಬಾಳ ಸಂಗಾತಿಯಾಗಿ ಆರಿಸಿ, ಅವಿವಾಹಿತನೊಬ್ಬ ಇಷ್ಟಪಟ್ಟರೆ ಅದು ವಿವಾಹವಾಗಲಾರದು, ಬದಲು ಕೂಡಾವಳಿ ಎಂದೇ ಕರೆಯುವರು. ಯಾವ ಒಂದು ವಿವಾಹವು ಧಾರೆ ಕಾರ್ಯಕ್ರಮವಿಲ್ಲದೆ ನಡೆಯುವುದೋ ಅದು 'ಕೂಡಾವಳಿ' ಆಗುವುದು. ಇಲ್ಲಿ ಧಾರೆಯು ಹೆಣ್ಣಿಗೆ ತನ್ನ ಜೀವನದಲ್ಲಿ ಒಂದು ಬಾರಿಯು, ಗಂಡಿಗೆ ಒಂದಕ್ಕಿಂತ ಹೆಚ್ಚು ಬಾರಿಯು ಇರುವುದರಿಂದ, ಧಾರೆ ಎಂಬ ಸಂಪ್ರದಾಯದಲ್ಲಿ ಬರುವ ಶಾಸ್ತ್ರದ ಶ್ರೇಷ್ಠತೆಯನ್ನು ಕಾಪಾಡಿರುವುದು ಹೆಣ್ಣು ಮಾತ್ರ. ಆದುದರಿಂದ ಒಮ್ಮೆ ಧಾರೆ ವಿವಾಹವಾದ ಹೆಣ್ಣನ್ನು ಯಾರೇ ಸಂಗಾತಿಯಾಗಿ ಬಯಸಿದರೂ ಅದು ಕೂಡಾವಳಿಯೇ ಎಂದು ಮನದಟ್ಟಾಗುವುದು. ಕೂಡಾವಳಿಯು ವಿಧವೆಯಾದರೂ ವಿಧುರನಾದರೂ ತನ್ನ ಜೀವನದ ಸಂಗಮತೆಗೆ ಬಾಳ ಸಂಗಾತಿಗಳಾಗಿ ಆರಿಸಿಕೊಳ್ಳುವುದು ಎಂದು ತಿಳಿಯುವುದು.

ಕೂಡಾವಳಿಯಲ್ಲಿ ಬಾಳ ಸಂಗಾತಿಗಳನ್ನು ತಲೆಗೆ ಅಕ್ಕಿ ಹಾಕಿ ಆಶೀರ್ವದಿಸುವಂತಿಲ್ಲ. ಉಡುಗೊರೆ ಕೊಟ್ಟರೂ ದೀಪಿಗೆಗೆ ಅಕ್ಕಿ ಹಾಕಿ ಕೂಡಾವಳಿಯಾದ ಸಂಗಾತಿಗಳು ಹಿರಿಯರ ಪಾದ ನಮಸ್ಕಾರ ಮಾಡುವಾಗ ಅವರಿಗೆ ಆಶೀರ್ವದಿಸುವುದು ಕ್ರಮ. ಕೂಡಾವಳಿಯಲ್ಲಿ ಗಂಡು ಹೆಣ್ಣಿಗೆ ಕಾಲುಂಗುರ, ಸೀರೆ, ರವಿಕೆ, ಮಾತ್ರ ಕೊಡುವುದು. [ಬಣ್ಣ ಬಂಗಾರವಿಲ್ಲ] ಹೆಣ್ಣು ಸ್ನಾನ ಮಾಡಿ ಗಂಡು ಕೊಟ್ಟ ಉಡುಪಿನಿಂದ ಅಲಂಕೃತಳಾಗಿ ನೆಲ್ಲಕ್ಕಿ ಅಡಿಗೆ ಬರುವುದು, ಗಂಡು ಕೂಡಾ ಸ್ನಾನಮಾಡಿ ತನ್ನ ಮದುಮಗನ ಪೋಷಾಕಿನಿಂದ ನೆಲ್ಲಕ್ಕಿ ಅಡಿಗೆ ಬರುವುದು. ಅಲ್ಲಿ ಊರುಗೌಡರು/ಮುಖ್ಯಸ್ಥರು ಹತ್ತು ಕುಟುಂಬ ಹದಿನೆಂಟು ಗೋತ್ರದ ಒಕ್ಕಣೆ ಹೇಳಿ. ಒಕ್ಕಲೆಜಮಾನಂಗೆ ಗಂಡಿನ ಕಡೆಯಿಂದ ಮೊದಲ ಕೂಡಾವಳಿಯಾದರೆ 2–25 ರೂ.ಗಳ ತೆರವಿನ ಹಣವನ್ನೂ, ಎರಡನೆಯ ಕೂಡಾವಳಿಯಾದರೆ 1–25 ರೂಪಾಯಿಯನ್ನು ತೆರವಿನ ಹಣವಾಗಿ ಕೊಡಿಸಿ, ಮೂರನೆಯದಾದರೆ ತೆರವಿನ ಹಣವಿಲ್ಲದೆ ಕೇವಲ ಬಿಳಿ ಸೀರೆಯನ್ನು ಮಾತ್ರ ಕೊಡುವರು. ತದನಂತರ ಸರ್ವರ ಒಪ್ಪಿಗೆ ಪಡೆದು ಗಂಡಿನಿಂದ ಹೆಣ್ಣಿಗೆ ತಾಳಿ ಕಟ್ಟಿಸುವುದು. [ಪುಷ್ಪಮಾಲಿಕೆಗಳನ್ನು ಹಾಕುವಂತಿಲ್ಲ, ಹತ್ತು ಕುಟುಂಬ ಹದಿನೆಂಟು ಗೋತ್ರ ಒಕ್ಕಣೆ ಹೇಳಬಹುದು ]

ಗಂಡು ಹೆಣ್ಣನ್ನು ತನ್ನ ಮನೆ ಹತ್ತಿಸಿಕೊಳ್ಳುವಾಗಲೂ ಯಾವುದೇ ತರಹದ ಶಾಸ್ತ್ರಗಳಿಲ್ಲ. ತುಪ್ಪ ತೆಗೆದುಕೊಂಡು ಹೋಗುವುದು, ಹತ್ತು ಉಳಿಯುವುದು, ಆಟೆಯ ಕ್ರಮ. ಇದು ಯಾವುದೂ ಕೂಡಾವಳಿಯಲ್ಲಿ ಬರುವುದಿಲ್ಲ.

ಕೂಡಾವಳಿ ಸಂಪ್ರದಾಯವು ಗೌಡ ಜನಾಂಗದಲ್ಲಿ ನಡೆದು ಬರುತ್ತಿದೆ. ಇದು ಧರ್ಮಕ್ಕೆ ಅನುಗುಣವೂ ಆಗಿದೆ. ಇದರಲ್ಲಿ ಯಾವುದೇ ಶಾಸ್ತ್ರವು ಕಂಡು ಬಾರದಿದ್ದರೂ, ಶಾಸ್ತ್ರವು ಧರ್ಮದ ಒಂದು ಅಂಗದಂತೆ, ಕೂಡಾವಳಿಯು ಸಹ ಧರ್ಮದ ಒಂದು ಅಂಗವೆಂದೇ ತಿಳಿಯುವುದು. ಶಾಸ್ತ್ರವಿಲ್ಲದ ಸಂಪ್ರದಾಯವೆಂದು ಸಮಾಜದಲ್ಲಿ ಇದಕ್ಕೆ ಮಾನ್ಯತೆ ಕಡಿಮೆಯಾಗಕೂಡದು. ಮಾನವನ ಜೀವನದ ಸುಗಮತೆಗೆ ಕೂಡಾವಳಿ ಸಂಪ್ರದಾಯದ ಅಗತ್ಯವಿದೆ. ಆದುದರಿಂದ ಸಂಪ್ರದಾಯದಂತೆ ನಡೆಯುವ ಈ ಕೂಡಾವಳಿಗೆ ಹಿಂದೂ ಸಮಾಜದ ಇತರ ಕೆಲವು ಜನಾಂಗದವರು ಕೂಡಾ ಮಾನ್ಯತೆಯನ್ನು ನೀಡಿರುವರು. ○

ಕೃಪೆ : ಗೌಡ ಸಂಸ್ಕೃತಿ, ಮಡಿಕೇರಿ.

## ನುಡಿ ಮುತ್ತು

ಮಕ್ಕಳಿಲ್ಲದವನು ಪುನರ್ ವಿವಾಹವಾದರೆ ಒಳ್ಳೆಯ ಕೆಲಸ ಮಾಡಿದನೆಂದು ಹೊಗಳುವರು. ಆದರೆ ಬಾಲ ವಿಧವೆ ಒಬ್ಬರು ಮದುವೆಯ ಮಾತು ಎತ್ತಿದರೆ ಇದು ಬಾರಿ ಪಾಪ ಎಂದು ತೆಗಳುವರು.

ಸಂಗ್ರಹ : ಮುಕ್ಕಾಟಿ ಮಮತಾ ಪೂಣಚ್ಚ, ಹೊಸ್ಕೇರಿ.

## ಅರೆ ಭಾಷಿಕ ವಿಭಾಗ

# ಶಿಕಾರಿ ಶೇಷಣ್ಣ

ಒಂದು ದಿನ ಮಳೆ ಜೋರಾಗಿ ಬಾತ್. ನಮ್ಮ ಅಜ್ಜಿ ಒಲೆಹತ್ರ ಕುದ್ದ್ ಕಂಡ್ ಹಲ್ಸನ ಹಣ್ಣ್‌ನ ಕಜ್ಜಾಯ ಹೊರಿತಿತ್ತ್. ನಾನ್ ಕಥೆ ಹೇಳಜ್ಜಿಂತ ಪೀಡ್ಸಿದೆ. ಕಥೆ ಹೇಳದಿದ್ದರೆ ಅಜ್ಜಿನ ಕೆಲ್ಸ ಮಾಡಿಕೆ ನಾನ್ ಬುಡ್ದುಲೆ, ಎಲೆ ಅಡಿಕೆ ಕುಟ್ಟಿ ಕೊಡ್ದುಲೆತ ಅಜ್ಜಿಗೆ ಗೊತ್ತಾತ್. ಒಂದು ಕಥೆ ಹೇಳಿಕೆ ಶುರು ಮಾಡ್ದೊ. ಆ ಕಥೆನ ನಾನ್ ಈಗ ಬರಿತೊಳೆ.

ನಮ್ಮ ಅಡ್ಕಾರ್ ಕೊರಗಪ್ಪಗೌಡ್ರು ಊರಿಗೆ ದೊಡ್ಡ ಸಾವುಕಾರ್ರು. ಹತ್ತಾರ್ ಜನ ಆಳ್‌ಗ ಮನೆ ಕೆಲ್ಸಕೆ ಸಾ ಇದ್ದೊ. ಅಂದ್‌ನ ದಿನಲಿ ಅದೂ ಹಳ್ಳಿ ಪ್ರದೇಶಲಿ ನಾಗರಿಕತೆದ್ ಸೋಂಕೇ ಇಲ್ಲದ ಕಾಲಲಿ ಏಲಕ್ಕಿ ಮಲೆಲಿ ಏಲಕ್ಕಿ ಕೃಷಿ ಮಾಡ್ದು ಒಂದು ಮುಖ್ಯ ಕಸುಬಾಗಿತ್ತ್. ಮೇ ತಿಂಗಳ ಆಕೇರಿಗೆ ಮಳೆ ಸುರು ಆತ್‌ಕೇಳ್ರೆ ಏಲಕ್ಕಿ ಮಲೆಲಿ ತಾತ್ಕಾಲಿಕ ಬಿಡಾರ ಮಾಡಿ ಏಲಕ್ಕಿ ತ್ವಾಟದ ಕಚ್ಚಡ ಕೆಲಸ ಭಾರಿ ರಭಸಂದ ಸುರು ಆಗಿದ್ದದೆ.

ಶೇಷಣ್ಣ ಅಂದಾಜ್ ಹತ್ತ್ ಹನ್ನೆರಡ್ ವರ್ಷದ ಸಣ್ಣ ಹೈದ. ಕಷ್ಟ ಪಟ್ಟ್ ಕೆಲ್ಸ ಮಾಡ್ವ ಮತ್ತೆ ನಂಬಿಗಸ್ತ ಹೈದ. ಅಂವ ಸುಬ್ರಹ್ಮಣ್ಯಘಟ್ಟದ ಕಡೆ ಜನ. ಹೇಳಿ ಕೇಳಿ ಕೊರಗಪ್ಪ ಗೌಡ್ರ ವಿಚಾರ ತಿಳ್ದ್ ಕೆಲ್ಸಕ್ಕೆ ಬಂದ್ ಸೇರ್ಕಂಡ್ತ್. ಆಗನ ಕಾಲಲಿ ಕೆಲ್ಸ ಗಾರ್ರ್‌ಗೆ ಬೇಟೆಯಾಡ್ದುತೇಳ್ರೆ ಭಾರಿ ಕುಷಿ ಮತ್ತೆ ಕೊರಗಪ್ಪ ಗೌಡ್ರರಿಗೆ 3 ಕೋವಿಗ ಇದ್ದ್ ಒಂದಕ್ಕೂ ಲೈಸನ್ಸ್ ಇತ್ತ್‌ಲೆ. ಆಗನ ಕಾಲಲಿ ಬ್ಯಾಟೆ ಮಾಡ್ರು ಸರ್ಕಾರದ ಯಾವುದೇ ಕಾನೂನು [ಅಡ್ಡಿ] ಇತ್ತ್‌ಲೆ. ಕಾಡಂದಿ, ಜಿಂಕೆ, ಕಡವೆ, ಹಿಂಗೆ ಜಾತಿಗಳ್ನ ಕೊಂದ್ ಮಾಸ ತಿಂದರೆ, ಹುಲಿನ ಹೊಡ್ದ್ ಕೊಂದ್ ಮದುವೆ ಮಾಡ್ನಿ ಮೆರವಣಿಗೆ ಮಾಡ್ಸಿಕೊಂಬತ್ತಿದ್ದೊ.

ಕೊರಗಪ್ಪ ಗೌಡ್ರಂತೂ ಬಾಳ ಗುರಿಕಾರ. ಅವನ ಕಣ್ಣ್‌ಗೆ ಬಿದ್ದ ಜಾತಿ ಉಳಿತ್ಲೆ. ಬ್ಯಾಟೆಲಿ ಕೆಲವು ಕ್ರಮನ ಕಡ್ಡಾಯವಾಗಿ ಪಾಲ್ಸತಿದ್ದೊ. ಬ್ಯಾಟೆ ಮೊದ್ಲು ಹೊಡ್ಡ ಗುಂಡು ತಪ್ಪಿಸಿದವಂಗೆ ಮತ್ತೆ ಕೋವಿ ಮುಟ್ಟಿಕೆ ಬುಡ್‌ತಿತ್ತ್‌ಲೆ. ಇದರ್ನ ಕೆಲ್ಸದವು ತಿಳ್ದ್ ಬಾಳ ಎಚ್ಚರ್‌ಕೆಂದ ನಾಯಿಗಳ ಹಿಡ್‌ಕಂಡ್ ಪ್ರಾಣಿಗ ಬರೊ ದಾರಿಲಿ ಪಾರಕುದ್ದ್ ಹೊಡ್ದ್ ಇನ್ನೊಂದು ತರ ಬ್ಯಾಟೆ ಮಾಡ್ತಿದ್ದೊ.

ಶೇಷಣ್ಣ ಯಾಗಳು ನಾಯಿಗಳ ಜೊತೆಲಿ ಕಾಡ್‌ನುಗ್ಗವರ ಗುಂಪುಲಿರ್‌ತ್ತಿತ್ತ್. ಕೋವಿನ ಆಗಾಗ ಆಚೆ ಈಚೆ ಹಿಡ್ದ್ ನೋಡಿ ಗುಂಡು ಹೊಡಿಯಕೆ ಆಸೆ ಆತಿತ್. ಆದರೆ ಕೋವಿ ಹಿಡಿಯಕೆ ಮಾತ್ರ ಅಲ್ಲದೆ ಹೊಡಿಯಕೆ ಅವಂಗೆ ಛಾನ್ಸ್ ಇಲ್ಲೆ. ತನ್ನ ಕಣ್ಣ್‌ಮುಂದೆನೆ ಬರುವ ಕಾಡ್‌ಕೋಳಿ, ಕೆಂಜಿರಿಗಳ ಹೊಡೆಕೆ ಆಸೆ ಪಟ್ಟ್ ಕನ್ಸ್ ಕಾಣ್‌ತ್ತಿತ್. ಒಮ್ಮೆ ಡಿಸೆಂಬರ್ ತಿಂಗಳ ಕಾಲ. ಯಾಲ ತ್ವಾಟದ ಕೆಲ್ಸ ಮುಗ್ಸಿ ಊರಿಗೆ ಬಂದಿರ್ಕನ ಬತ್ತದ ಗದ್ದೆ ತೆನೆ ತುಂಬಿ ಹುತ್ರಿ ಹಬ್ಬನ ಕರಿತಿತ್ತ್. ಆಗ ಗೌಡ್ರು ಶೇಷಣ್ಣನ ಕರ್ದ್ ನಮ್ಮ ಹುತ್ತೇರಿ ಹಬ್ಬ ಹತ್ರ ಬಾತಲ್ಲ. ಈ ವರ್ಷ ಒಳ್ಳೆ ಗೌಜಲಿ ಹಬ್ಬ ಮಾಡೋನತ ಹೇಳ್ಕನ ಶೇಷಣ್ಣಂಗೆ ಒಳ್ಳೆಕುಷಿನು ಆತ್. ಒಮ್ಮೆಗೆ ತಲೆಗೆ ಹೊಳ್ದದ್ ಹುತ್ರಿ ದಿನ ಕದಿರ್ ಕೊಯ್ಯ್‌ಕನ ಗುಂಡು ಹಾರ್ಸ್ನದು. ಹೆಂಗೂ ಗೌಡ್ರೆ ಕದ್ರ್ ಕೊಯ್ಯ್‌ದು. ನಾನೆ ಯಾಕೆ ಗುಂಡು ಹೊಡ್ವರೆ ಆಗ್‌ದತ ಗ್ಯಾನ ಮಾಡಿ ಸಾವುಕಾರ್ರ ಹತ್ರ ಹೇಳಿಕೆ ಧೈರ್ಯ ಸಾಲದೆ ಸಾವುಕಾರ್ತಿ ಹತ್ರ ಹೇಳ್ತ್. ಸಾವುಕಾರ್ತಿಗೆ ಶೇಷಣ್ಣ ತೇಳ್ರೆ ತನ್ನ ಮಗಂದ ಜಾಸ್ತಿ ಪ್ರೀತಿ. ರೊಟ್ಟಿ ಚಟ್ನಿ ಮೇಲೆ ಬೆಣ್ಣೆ ಹಾಕಿ ಕೊಡ್ಕನ ಶೇಷಣ್ಣನ ಹೃದಯ ತುಂಬಿ ಬರ್ತಿತ್ತ್. ಯಜಮಾನ್ತಿ ಗೌಡರಿಗೆ ಒಪ್ಸಿತ್. ಪಾಪ ಹೈದಂಗೆ ಗುಂಡು ಹೊಡೆಕೆ ತುಂಬಾ ಆಸೆ ಉಟ್ಟು. ನೀವು ಕದ್ರ್ ಕೊಯ್ಯ್‌ಕನ ಅವನೇ ಗುಂಡು ಹೊಡೆಲಿ. ಇದೇನ್ ಪ್ರಾಣಿಗೆ ಹೊಡೆದು ಅಲ್ಲಲಾತ ಹೇಳಿ ಒಪ್ಸಿದೊ. ಶೇಷಣ್ಣ

**ಕೆ. ಬಿ. ಮಿಲನ್ ಭರತ್, ಬೆಟ್ಟಗೇರಿ**

ಕುಷಿಂದ ಉಬ್ಬಿಹೋತು. ಕನ್ಸ್‌ಲಿ ಸಾ ಕೋವಿ, ಗುಂಡು, ಕದ್ರ್ ಕೊಯ್ಯೊದು ಎಲ್ಲಾನೂ ಗ್ಯಾನ ಮಾಡ್ತ್. ಅಂತೂ ಆದಿನ ಬಂದ್‌ಬುಡ್ತ್. ಮನೆಯವುಕೆಲ್ಲ ಹಬ್ಬದ ಜೋರು. ಗಂಡ್ ಜನೆಲ್ಲಾ ಕುಡ್ದ್ ತಿಂದ್ ಮಜಲಿದ್ದೊ.

ಶೇಷಣ್ಣಂಗೆ ಬೆಳ್ಗಂದ ಕೋವಿ ಎತ್ತುದು ನೋಡ್ದು, ಪುನ ಅಲ್ಲೆ ಇಡ್ದು, ಗಂಟೆ ನೋಡ್ದು ಇದೇ ಕೆಲ್ಸ. ಸಾಯಂಕಾಲ 8 ಗಂಟೆಗೆ ಕದ್ರ್ ಕೊಯ್ಯ್‌ಕನ ಎಲ್ಲವು ಸರಿಯಾಗಿ ಪೊಲಿ, ಪೊಲಿಯೇ ಬಾ, ಪೊಲಿ ದೇವ ಬಾತ ಹೇಳ್ಕಂಡ್ ಬೇರೆ ಬೇರೆ ಜಾಗಲಿ ನಿತ್ತಿದ್ದೊ.

ಗೌಡ್ರು ಬಿಳಿ ಕುಪ್ಪುಸ ಹಾಕಿ ತಲೆಗೆ ರುಮಾಲು ಇಟ್ಟ್ ಕದ್ರ್ ಕೊಯ್ಯ್‌ಕೆ ತಯಾರಿದ್ದೊ. ಶೇಷಣ್ಣ ಕೈಲಿ ಗಡಿ ಕಾಯುವ ಭಾರತದ ಸಿಪ್ಪಾಯಿ ತಿಸ್ತ್‌ನ ಸಿಪಾಯಿನಂಗೆ ಕೋವಿ ಹಿಡ್ದ್ ಸಾವುಕಾರ್ನ ಆಜ್ಞೆಗೆ ಬರ್ಲಿತ ಕಾಯ್ತಿತ್ತ್. ಎಲ್ಲವೂ ಗುಂಡು ಹೊಡಿ ಶೇಷಣ್ಣ ಗುಂಡು ಹೊಡಿ ಶೇಷಣ್ಣತಾ ಹೇಳ್ದೊ. ಗೌಡ್ರ ಮೇಲಿನ ನಿಯಮನ ಮರಿಯದೆ, ಗುರಿ ತಪ್ಪಿಸಿ ಕ್ಯಾದ್‌ತ ಶೇಷಣ್ಣ 'ಡಮಾರ್'ತ ಹೊಡ್ದೆ ಬುಡ್ತ್. ಇಂವ ಯಾವ ಕಡೆಗೆ ಕೋವಿ ಹಿಡ್ದುಟ್ಟು, ಎಲ್ಲಿಗೆ ಗುಂಡು ಹೋತ್ತ್ ತೇಳಿ ಯಾರು ನೋಡ್ತ್‌ಲೆ. ಶೇಷಣ್ಣ ಕದ್ರ್ ಕೊಯ್ಯ್‌ಕನ ಸರಿಯಾಗಿ ಹಾರ್ಸಿದ ಗುಂಡು ಸಾವ್ಕಾರನ ಕಾಲ್ನ ಸಂದ್‌ಗಾಗಿ

ಕೈಗೆ ಬಡ್ತ್. ಜನ ಎಲ್ಲಾ ಅಯ್ಯಯ್ಯೋ ತ ಬೊಬ್ಬೆ ಹಾಕಿನೋ, ಸ್ವಲ್ಪ ಜನ ಹಂಗೇ ಅಳುತಾ ಪೇಳ್ದೊ ಗೌಡ್ರು ಸೊಯತಪ್ಪಿ ಬಿದ್ದೊದೊ ಜನ ಎಲ್ಲಾ ಶೇಷಣ್ಣಂಗೆ ನೀನ್ ಹಿಂಗೆ ಪಸಾಡ್ದ ಮಾರಾಯ? ಕದ್ರು ಕುಯ್ಯಕನ ಗುಂಡು ಹಾರ್ಸ್ತೆಳ್ರೆ ಕುಯ್ಯವುಕೆ ಹೊಡ್ದಲ್ಲಾ, ನಿಂಗೆ ಸೊಯ ಇಲ್ಲೇನಾ ತಾ ಬೊಯ್ದೊ ಸ್ವಲ್ಪ ಜನ ಪೊಲಿ ಪೊಲಿ ತ್ತೇಳ್ದ್ ಬುಟ್ಟ 'ರಾಮ' ರಾಮತ್ತೇಳಿ ಆಸ್ಪತ್ರೆಗೆಹೋಗಿ ಸೇರಿಸಿದೋ. ಶೇಷಣ್ಣ ನಾನ್ ಇನ್ನ್ ಈ ಜನ್ಮಲಿ ಕೋವಿ ಹಿಡಿಯಕಿಲೆತ್ತೇಳಿ ಅಡ್ಡ ಸ್ಡ ಬಿದ್ಕಂಡ್ ಮರ್ಬತ್.

ವಿಚಾರನ ಗುಟ್ಟ್ಯಾಗಿ ಮುಚ್ಚಿಟ್ಟ ಚೆವುಣ ಗೌಡ್ರ ದುಡ್ಡು ಆಸ್ಪತ್ರೆಗೂ, ಲೈಸನ್ಸ್ ಇಲ್ಲದ್ದರ್ಂದ ಸ್ವಲ್ಪ ಪೊಲೀಸ್ ನವುಕೆ ನೀರ್‌ನಂಗೆ ಖರ್ಚಾತ್. ಗೌಡ್ರ ದುಡ್ಡು ಖರ್ಚಾದರ್ಲೂ ಗೌಡ್ರ 4 ಬೆರಳ್ ಗಳ್ನ ತೆಗ್ದ್ ಹಾಕಿದ್ನ ನೋಡಿ ಶೇಷಣ್ಣ ಮುಷ್ಟಕಂಡ್ ನಾನ್ ಸಾಯೋವರ್ಗೆ ನಿಮ್ಮ ಕೆಲ್ಸ ಮಾಡ್ಕಂಡ್ ಇದ್ದನೆತಾ ಕಾಲಿಗೆ ಬಿದ್ದತ್. ಗೌಡ್ರು ಹೇಳ್ದೊ ಶೇಷಣ್ಣ ದೇವ್ರು ದೊಡ್ಡವ. ಎಲ್ಲರೂ ಒಂದಲ್ಲಒಂದು ದಿನ ಸತ್ತವೆ. ನಾವು ಸತ್ತರೂ ನಮ್ಮ ಹೆಸ್ರು ಒಳ್ಳೆತನಲಿ ಉಳಿಯಕು. ಅಂತ ಕೆಲ್ಸ ನಾವು ಮಾಡೊಕು. ಮನ್ಸ, ಆಸೆ, ಕೇಡ, ಮತ್ಸರ ಬುಟ್ಟ ಬದುಕಕು. ಇಂದ್ ನೀನ್ ನನ್ನ ಕಣ್ಣ್ ತೆಗ್ಸಿದ. ನೀ ನನ್ನ ಸ್ವಂತ ಮಜ ಇದ್ದಂಗೆತ್ತೇಳಿ ತಬ್ಬಿ ಕಂಡೋ.

ಅಜ್ಜ ಕಥೆ ಹೇಳಿ ಮುಗ್ಸಿದ ಮ್ಯಾಲೆ ನಂಗೆ ಆತ್, ಈ ಶೇಷಣ್ಣಂಗೆ ಅಷ್ಟ ಗುಂಡ್ ಹೊಡೆಯಕೆ ಆಸೆ ಇದ್ದಿದ್ದರೆ ಅಂದ್‌ನ ಕಾಲಲಿ ನಮ್ಮ ಸೈನ್ಯಕ್ಕೆ ಭಾರಿ ಸುಲ್ಬಲಿ ಸೇರಿ ವೀರ ಯೋಧನಾಗಿ ಗುಂಡು ಹೊಡೆಕಾಯಿತ್ತಲ್ಲ? ಆಗ ಅಜ್ಜ ಹೇಳ್ತ್ ಅದೆಲ್ಲ ಕಳ್ದ್ ಹೋದ ಕಥೆ. ಶೇಷಣ್ಣಂಗೆ ಹುತ್ರಿನ ಗೌಜಲಿ ಮಾಡ್ದ ತಿಂಡಿ ತಿನ್ನುವ ಆಸೆ ನಿರಾಸೆ ಆತ್. ಗುಂಡುನ ಕಥೆನು ಹಿಂಗೇ ಆತ್. ಇನ್ನ್ ನಂಗೆ ತಿಂಡಿ ತಿನ್ನೊ ಕುತ ಮನಸಿಲ್ಲಿ. ಶೇಷಣ್ಣನ ಕಥೆ ಕೇಳ್ದ ನಂಗೆ ಸೈನ್ಯಕ್ಕೆ ಸೇರಿ ದೇಶ ರಕ್ಷಣೆ ಮಾಡೋ ಮನಸ್ಸಾತ್. ಹಂಗೆನೆ ಅರೆಭಾಷೆಲಿ ನನ್ನ ಕಥೆನ ಬರೆಕೆ ದಾರಿದೀಪ ಮಾಡ್ದ ಹೆಮ್ಮೆಯ ಕೊಡಗು ಸಂಗಾತಿನ ಪ್ರಾಣ ಕೊಟ್ಟ್ಯಾರು ಉಳಿಸೊ ನಿರ್ಧಾರ ಮಾಡಿ, ಪೊನಿಧ್ವನಿ ಕ್ಯಾಸೆಟ್ ಹಾಕಿ ಡ್ಯಾನ್ಸ್ ಮಾಡ್ದೆ. ಕೋಲು ಹೊಡ್ದ್ ಕುಣ್ದ್ ಕುಪ್ಪಳ್ಸಿದೆ. ●

## ಬಸವ ಮಹಿಮೆ

ಅಚೆಮನೆ ರಾಂಪನೂ, ಕೆಳ್ಗಮನೆ ಸ್ವಾಂಪನೂ ಹಾವು ಕೀರಿಗ ಇದ್ದಂಗೆ. ಅವರ ಮುಸುಂಡು ಕಂಡ್ರೆ ಇವ್ಕೆ ಆದುಲೆ, ಇವರ ಮುಸುಂಡು ನೋಡ್ರೆ ಅವ್ಕೆ ಆದುಲೆ. ಒಂದು ಸಣ್ಣ ನ್ಯಾನನ ಸಿಕ್ಕಿರೂ ಸಾಕ್, ಇಬ್ಬರೂ ಕಾಲ್‌ಕೆರ್ಕಂಡ್ ಜಗಳಕೆ ಸುರು ಮಾಡುವೆ. ಅವರ ಹೆಣ್ಣ್ ಮಕ್ಕಳೋ! ಅವುಕ್ಕಿಂತ ಜಾಸ್ತಿ. ನೆರೆಕರೆಲಿ ಇರುವ ಮನೆಗ ತೇಳ್ದ ಮ್ಯಾಲೆ, ದನ-ಕರ್‌ಗ, ಹಂದಿ-ಕೋಳಿಗ, ಅತ್ತ-ಇತ್ತ ಹೋದೂ-ಬಾದೂ ಇದ್ದದೆಲ? ಅವುಕ್ಕೇನ್ ಗೊತ್ತುಟಾ ಮನ್ಸರಂಗೆ? ಆ ಕಡೆ ಹೋಕಾಗದ್ ತ ಹಂಗಾಗಿ ಎರ್ಡ್ ಕಡೆಯುವರ್ದೂ ಸಾಂಕ್ ಪ್ರಾಣಿಗ ಕೆಲವಂತೂ ಕೈ ಕಾಲ್ ಮುರ್ಕಂಡೊಳೊ.

ಒಂದಿನ ರಾಂಪನ ಮಗ್ಳು ಕಲ್ಯಾಣಿ ಹೊತಾರೆ ತಿರ್ಗ್ಯಾರಿ ತ್ವಾಟಕೆ ನೀರ್ ಹೊಯ್ಯಕೆತ ಹೋತು. ಅಲ್ಲಿ ದನಗಳ ಹೆಜ್ಜೆ ಗುರ್ತುರ್ಕಂಡ್, ಇದ್ ಕೆಳ್ಗಮನೆಯವರ ದನಗಳೇ ತ್ವಾಟಕೆ ಹುಕ್ಕಿದ್. ಇದ್ ಅವರ ಗ್ರಾಚಾರ ಬುಡ್ಸಿನೆ ತೇಳಿ ಗ್ಯಾನ ಮಾಡಿಕಂಡ್ ನೀರ್ ಹೊಯ್ಯೊದನ್ನ ಬುಟ್ಟ ಸಿಟ್ಟ್‌ಲಿ, ಬುಸು ಬುಸುತೇಳಿಕಂಡ್ ಮನೆಗೆ ಬಾತ್. ಅವರ ಬಾಯಿಗೆ ಮೊಣ್ಣ್ ಹಾಕ, ಯಾವ್ದೋ ಎತ್ತ್ ತ್ವಾಟಕೆ ನುಗ್ಗಿ ಮೆಣಸ್ಸ ಪಾತಿನ ಎಲ್ಲ ಮೆಟ್ಟಿ..ಮೆಟ್ಟೀ...ನಾಶ ಮಾಡಿ ನೊಡೂ...ಲಿ ಒಂದು ರಾಶಿ ಸೆಗ್‌ಣಿ ಹಾಕ್ಯುಟುತ ಅಮ್ಮನೊಟ್ಟಿಗ ಹೇಳ್ತ್. 'ಅದ್ ನಮ್ಮ ಬಸುವ ಎತ್ತ್ ಗಡ ನೇ. ನಿನ್ನೆ ಸಾಂಯ್ಯಾಲ ಪೊಪ್ಪ ಹೋಗಿ ಬಿಚ್ಚಿಬುಟ್ಟ ಬಂದೊಳೊತ ಅಮ್ಮ ಹೇಳ್ದೀ ತಪ. ಅವಳ ಸಿಟ್ಟೆಲ್ಲ ಒಮ್ಮೆಗೆ ಪುಸ್...ತ ಇಳ್ದೋತು.' ನಮ್ಮ ಬಸುವನಾ ಅದೇ ಕಳ್ಳ! ಮೆಣಸ್ಸ ಪಾತಿ ಕರೆ, ಕರೆಲಿ ಹಳಾ ಮೆಟ್ಟ್ಯುಟು ಮತ್ತೆ ಇತ್ತ ಬಂದ್ ಈಚೆ ಕರೇಲಿ ಇಟ್ಟೀ...ಇಟ್ಟ ಸೆಗ್‌ಣಿ ಹಾಕ್ಯುಟುತೇಳಿ ಮಾತ್ ಬದ್ಲಾಯಿಸಿಬುಡ್ತ್.

ಅಲ್ಲೇ ನಿತ್ತಿದ್ದ ಅವಳ ಅಣ್ಣ ವಿಟ್ಟಗೆ ಈ ಮಾತ್ ಕೇಳಿ ನೆಗೆ ತಡ್ಕೆ ಬೊತ್ತು. ಕಲ್ಯಾಣೀ ಯಾವುದೇ ವಿಷಯ ಆಗಲಿ, ಅವರ್ನ ಸರಿಯಾಗಿ ಅರ್ಥಮಾಡಿಕಣದೆ ಮಾತಾಡಿಕೆ ಹೋದರೆ ಹಿಂಗೇ ಆದು ನೋಡು. ಮನಸ್ಸಲಿ ಕೆಟ್ಟ ಆಲೋಚನೆಗಳೇ ತುಂಬಿಕಂಡಿದ್ದರೆ, ನೊಡ್ದು ಎಲ್ಲ ನಮಿಗೆ ಕೆಟ್ಟದಾಗೇ ಕಂಡದೆ. ನೀನ್ ಈಗ ಆಡ್ದ ಮಾತ್‌ನ ಬಗ್ಗನೇ ಸೊಲ್ಪ ಗ್ಯಾನ ಮಾಡಿ ನೋಡು, ನಿಂಗೇ ಎಲ್ಲ ಅರ್ಥ ಆದೆ. ಹಂಗಾಗಿ ಎಂತದೇ ಮಾತಾಡ್ತ್ರ ತಾಳ್ಕಂದ, ತಪ್ಪು-ಸರಿಗಳ ವಿಚಾರ ಮಾಡಿ ಮಾತಾಡೊಕು. ನೀನ್ ಈಗ ಬಾಕನ ಹಾದಿಲಿ ಎಲ್ಯಾದ್ರು ಕೆಳ್ಗ ಮನೆವು ಯಾರಾದ್ರು ಸಿಕ್ಕಿದ್ದಿದ್ದರೆ! ದೊಡ್ಡ ರಗಳೆನೇ ಮಾಡಿರ್ತ್ತೊ. ಇನ್ನ್ ಮುಂದೆ ಆದ್ರೂ ಸೊಲ್ಪ ಹಿಂದೆ ಮುಂದೆ ಗ್ಯಾನಮಾಡಿ ಮಾತಾಡ್‌ತ ಅಂವ ಹೇಳ್ತ್. ವಿಟ್ಟುನ ಮಾತ್ ಕೇಳ್ದ ಕಲ್ಯಾಣಿ, ನಾಚಿಕೆಲಿ ನಾಲಿಗೆ ಕಚ್ಚಿಕಂಡ್ ತಲೆ

[20ನೇ ಪುಟ ನೋಡಿ]

# ಕಬ್ಬೆಕ್ಕ್ ತೇಳಿ ತಿಂದರೆ ಕೊತ್ತಿನ

ದೇವಜನ ಸ್ವರೂಪ ರಾಜ, ಬೆಂಗಳೂರು

ನಮ್ಮ ಮನೆ ಬೆಂಗಳೂರು ಯಲಹಂಕ ಹತ್ರ ಅನಂತ ಪುರ ಊರುಲಿ ಇರ್‍ದ್. ಮನೆಂದ ಸ್ವಲ್ಪ ದೂರಲಿ ನೀಲಗಿರಿ ಮರ ತೋಟ. ಅದರ ಹತ್ರ ರಾಗಿ ಹೊಲ.

ನಮ್ಮ ಅಪ್ಪಂಗೆ ಬೆಳಗ್ಗೆ 6 ಗಂಟೆಗೆ ಎದ್ದ್ ಸ್ವೀಟಿ, ಬಾಬಿ ತೇಳ್ವ ಎರ್‍ಡ್ ಬಿಳಿ ನಾಯಿಂಗಳ ಕರ್‌ಕಂಡ್ ನೀಲಗಿರಿ ತೋಟದ ಕಡೆ ವಾಕ್ ಹೋಪದು ಒಂದು ಅಭ್ಯಾಸ. ಅಪ್ಪ ಯಾಗೋಳು ವಾಕ್ ಹೋಗುವಂಗೆ ನಾಯಿಂಗಳ ಕರ್‌ಕಂಡ್ ವಾಕ್ ಹೋತ್. ಹೋಗಿ ಸ್ವಲ್ಪ ಹೊತ್ತ್‌ಗೆ ನಾಯಿಂಗ ಬೊಗುಳ್ದ್ ಕೇಳ್ತಾ ಇತ್ತ್. ಅಪ್ಪ ಅಲ್ಲಿಂದ ಸ್ವರೂಪ, ನಿರೂಪ್, ಹ್ಯಾಪಿ, ದೊಣ್ಣೆ ತಕಂಡ್ ಬೇಗ ಬನ್ನಿ ನೇ ತೆಳಿಕಂಡ್ ಕಿರಿಚ್ತಾ ಇತ್ತ್. ಅವ್ವ ಗಾಬರಿಯಾಗಿ ರೊಟ್ಟಿಗೆ ಕಲ್ಸಿಕಂಡ್ ಇದ್ದ ಕೈಲಿ ಎಲ್ಲಾ ಸೇರಿ ದೊಣ್ಣೆ ತಕಂಡ್ ಅಪ್ಪನತ್ರ ಓಡಿ ಹೋದೊ.

ಅಲ್ಲಿ ಹೋಗಿ ನೋಡ್ರೆ ಎಂತರ ಹೇಳ್ದ್? ಅಪ್ಪ ನೀಲಗಿರಿ ಮರಕ್ಕೆ ಹತ್ತಿದೆ ಜಾರ್‍ದೆ, ಹತ್ತಿದೆ ಜಾರ್‍ದೆ. ಮರ ಮೇಲೆ ಒಂದು ಕೊತ್ತಿನಂಗೆ ಕುದ್ದಿತ್ತ್. ನಾಯಿಂಗ ಕೆಳ್ಗಿಂದ ಬೊಗುಳ್ತಾ ಒಳೊ. ಅಪ್ಪ ನಮ್ಮನ ಕಂಡ್ 'ಛೂ ಕೂಡ್ಸಿ ಮಕ್ಕಳೇ' ತೇಳ್ತ್. ನಾವು ಎಲ್ಲಾ ಸೇರಿ ಛೂ, ಛೂ, ಹ, ಛೆ ಕೂಡ್ಸಿದೊ. ಕೊತ್ತಿ ಮರಂದ ಹಾರಿ ಕೆಳಗೆ ಬೀತ್. ನಮ್ಮ ಸ್ವೀಟಿ ನಾಯಿ ಗಬಕ್ ತ ಕೊತ್ತಿನ ಕಚ್ಚಿ ಕೊಂದೆ ಬುಡ್ತ್. ಅಪ್ಪಂಗೆ ಬಾಳ ಕುಷಿ ಆಗಿಬುಡ್ತ್. 'ಏನಾದರ್ ಆಗಲಿ ಮಕ್ಕಳೆ, ಇಂದ್ ಒಂದು ಕಬ್ಬೆಕ್ ಬೇಟೆ ಆತ್ ತೇಳ್ತ್. ಆಗ ಅವ್ವ ನಿಮ್ಗೆ ಹೆಂಗೆ ಗೊತ್ತ್ ಇದ್ ಕೊತ್ತಿ ಅಲ್ಲಾ, ಇಲ್ಲೆ ಕಬ್ಬೆಕ್ಕ್ ತೇಳ್ಚನ ಅಪ್ಪ ನಿಂಗೆ ನೋಡ್ಚನ ಗೊತ್ತಾದುಲೆನೇ. ಕಬ್ಬೆಕ್‌ದ್ ಬಾಲ ಗೊಂಡೆ ದಪ್ಪ ಆಗಿ ಇಪ್ಪದೆ. ಅದ್ ಸ್ವಲ್ಪ ಬೂದು ಬಣ್ಣ, ಹೊಟ್ಟೆ ಅಡಿಲಿ ಬರೆಇದ್ದದೆ. ಸಣ್ಣ ಕಣ್ಣ್, ದೊಡ್ಡ ಕೆವಿ ನೆಟ್ಟಂಗೆ ಇದ್ದದೆ. ಅದ್ ಒಂದು ಸಿಂಡ್ ಬಂದಪೆ ತೇಳ್ತ್. ನಾವೆಲ್ಲಾ ಸೇರಿ ಮಿಲ್ಟ್ರಿಲಿ ಮೆಡಿಕಲ್ ಇನ್ಸ್‌ಪೆಕ್ಷನ್ ಮಾಡ್ದಂಗೆ ಇನ್ಸ್‌ಪೆಕ್ಷನ್ ಮಾಡ್ದೊ. ನೋಡ್ಚನಾ ಅಪ್ಪ ಹೇಳ್ದಂಗೆ ಇತ್ತ್. ಅಪ್ಪ ಮೊನ್ನೆ ಇದೇ ತರ ಬೆಕ್ಕ್‌ನ ಕೆಂಚಪ್ಪ ತಕಂಡ್ ಹೋಗ್ತಾ ಇತ್ತ್ ತೇಳ್ಚನ ನಾವೆಲ್ಲಾ ಇದ್ ಕಬ್ಬೆಕ್‌ತ ನಂಬಿದೊ. ಅಂತೂ ನಂಗೆ ಸ್ವಲ್ಪ ಡೌಟು. ಈ ಕಬ್ಬೆಕ್ಕ್ ಬೆಂಗಳೂರಿಗೆ ಹೆಂಗೆ ಬಾತ್‌ತ ಕೇಳಿಕಾಕನ ಅಪ್ಪ ಇದ್ ನ್ಯಾಷನಲ್ ಪಾರ್ಕ್‌ಂದ ಬಂದಿರ್‍ದ್ ತೇಳ್ತ್. ಆಗ ಅಕ್ಕ ನ್ಯಾಷನಲ್ ಪಾರ್ಕ್ ಇಲ್ಲಿಂದ 50 ಕಿ ಮಿ. ಉಟ್ಟ್. ಕಬ್ಬೆಕ್ಕ್ ಇಲ್ಲಿಗೆ ಹಾರಿಕಂಡ್ ಬಂದೆದಾ ತೇಳ್ಚನ ಅಪ್ಪ ಮೊನ್ನೆ ಕೋಚನ ಮನೆವು ಕೊಡಗ್‌ನ ಗಾಳಿಬೀಡ್‌ಗೆ ಹೋಗಿದ್ದೊಲೆ. ಅವು ಬಾಕನ ಅದರ ಸಿಂಡ್ ತಕಂಡ್ ಬಂದಿರ್‍ದ್ ತೇಳಿ ನಮ್ಮ ಬಾಯಿನ ಮುಚ್ಚಿಸಿಬುಡ್ತ್. ಹುಟ್ಟಿದ ಮೇಲೆ ಕಬ್ಬೆಕ್ಕ್ ಕಾಣದವು ಇದ್ ಆಗಿರ್‍ದ್ ತೇಳಿ ನಾವೆಲ್ಲಾ ಸುಮ್ಮನೆ ಆಗಿಬುಟ್ಟೊ.

ಅಪ್ಪ ಅದರ್‍ನ ಮನೆಗೆ ತಂದ್ ಬೆಂಕಿ ಮಾಡಿ ಬಿಸಿ ಬೂದಿಲಿ ಉಜ್ಜಿ ಅದರ ರೋಮನ ಕೀಳ್‌ತಾ ಇತ್ತ್. ಆ ರೋಮ ಸರಿಯಾಗಿ ಬಾರದೆ ಚಕ್ಕಳ ಜಾರ್ಸಿತ್. ಅದರ ತಲೆ, ಕಾಲ್‌ನ ನಾಯಿಂಗಳಿಗೆ ಹಾಕಿತ್. 2 ಕೆ. ಜಿ. ಮಾಸ ಆತ್. ಆಗ ಅಪ್ಪ ಇದ್ ಕಾಡ್ ಮಾಸ ಅಲ್ಲನೆ ಎಲ್ಲವುಕೆ ಹಂಚಿ ತಿನ್ನೊಕುತೇಳಿ 6 ಪಾಲ್ ಮಾಡ್ತ್. ಕೋಚನವುಕೆ, ಜೈನಿಗೆ ಜಾನಕಿ ಅತ್ತಿಗೆಗೆ, ದೊಡ್ಡಪ್ಪ ಕಮಾಂಡೆಂಟ್ ಧನಂಜಯಂಗೆ, ಪೂಜಾರಿ ಕವಿತ್ತಕ್ಕಂಗೆ ಮತ್ತೆ ನಾಯಿಪಾಲ್‌ತಾ ಮಾಡ್‌ತ್. ನಾನ್ ಹಸ್ಟ್ ಮುಟ್ಟಿದ್. ಬೇವ್ ನಂಗೆ ತೆಳಿ ಬೇವ್‌ನ ನಮ್ಮ ಪಾಲಿಗೆ ಹಾಕಿತ್. ಅಷ್ಟೊತ್ತಿಗೆ ಕೊಡಗ್‌ಂದ 3 ಜನ ನೆಂಟ್ರ್ ಬಂದೆ ಬುಟ್ಟೊ. ಅಪ್ಪಾ ಏನಾದ್ರ್ ಆಗಲಿ ಒಂದು ಕೋಳಿ ಬಾಕಿ ಆತ್‌ತೆಳಿ ಮಿಲಿಟರಿ ಕಳ್ಳ್‌ನಾ ಮೇಜಮೇಲೆ ಮಡಿಗಿತ್. ಅವ್ವ ಅಕ್ಕಿ ರೊಟ್ಟಿ ಬೆಕ್ಕ್ ಮಾಸ ಸಾರ್ ಮಾಡಿ ಮೇಜ ಮೇಲೆ ಮಡಿಗಿತ್. ಎಲ್ಲವು ಸೇರಿ ಗದ್ದಳ ಊಟ ಮಾಡ್ದೊ. ನಂಗೆ ಸ್ಕೂಲ್ ಬುತ್ತಿಗೆ ಅವ್ವ ಬೆಕ್ಕ್ ಮಾಸ ಕಟ್ಟಿ ಕೊಡ್ತ್. ಸ್ಕೂಲ್‌ಗೆ ಹೋಗಿ ಕ್ಲಾಸ್‌ಲಿ ಟೀಚರ್ ಪಾಠ ಮಾಡ್‌ಕನ ನಂಗೆ ಕಬ್ಬೆಕ್‌ದ್ ಗ್ಯಾನ. ಟೀಚರ್ ನನ್ನತ್ರ ಕೇಳ್ತ್, ಡೆಲ್ಲಿ ಕಾ ಪಹಲೆ ನಾಂ ಕ್ಯಾ ತಾ ಸ್ವರೂಪ್. ನಾನ್ ಎದ್ದ್ ನಿತ್ತ್ ಕಬ್ಬೆಕ್ ತೇಳ್‌ದೆ ಗಲಕ್ತ್ ಹೈ ತೇಳಿ ಟೀಚರ್ ಕೂರ್ಸಿತ್. ಸಾಯಂಕಾಲ ಮನೆಗೆ ಬಾಕಾಕನ ಹತ್ರದ ನೆರೆ ಮನೆಂವ ಮನೆಲಿ ಬಂದ್ ನಮ್ಮ ಬೆಕ್ಕ್ ಕಂಡ್ರೆನಮ್ಮಾ? ರಾಗಿ ಗದ್ದೆಗೆ ಇಲಿಗಳು ತುಂಬಾ ಬರ್‍ತಾ ಇತ್ತ್ ಕಣಮ್ಮ. ಅದ್ಕೆ ನಮ್ಮ ಮನೆ ಬೆಕ್ಕನ್ನ ರಾಗಿ ಗದ್ದೆತ್ರ ಬಿಟ್ಟಿದ್ದೆ ತೇಳ್‌ತ್. ನಾನ್ ಕೇಳ್ದೆ ನಿಮ್ಮ ಬೆಕ್ಕು ಹೆಂಗುಟ್ಟ್? ಆಗ ಅಂವ ಬೂದು ಬಣ್ಣ, ಸಣ್ಣ ಕಣ್ಣ್, ದೊಡ್ಡ ಕಿವಿ, ಹೊಟ್ಟೆ ಅಡಿಲಿ ಬರೆ ಇತ್ತ್ ತೇಳ್‌ತ್. ಆ ಕೊತ್ತಿನೆ ನಾವ್ ತಿಂದ ಕೊತ್ತಿ. ಆಗ ಅವ್ವ ನಾವು ನೋಡಿಲ್ಲಾ ರ್ರೀ ತೇಳಿ ಅವನ ಕಳ್ಸಿಬುಡ್ತ್. ನಾನ್ ಅಪ್ಪನ ಇದ್ ಏನಪ್ಪಾ ನಮಿಂಗೆ ನೆಂಟ್ರ್‌ಗೆ ಕೊತ್ತಿ ತಿನ್ನಿಸಿ ಬುಟ್ರಲಾ ತೇಳ್‌ಕನಾ ಅಪ್ಪಾ ಆಗ ಕೊತ್ತಿ ಕೊಂದಾತ್, ತಿಂದಾತ್, ಇನ್ನ್ ಸುಮ್ಮನಿರಿ. ನೆಂಟ್ರ್‌ಗೆ ಹೇಳ್‌ಬಡಿ. ನಾನ್ ಮಿಲಿಟ್ರಿ ಕಮಾಂಡೊಲಿ ಇರ್‌ಕನಾ ತುಂಬಾ ಕೊತ್ತಿ, ನಾಯಿ, ಹಾವು, ಕಪ್ಪೆ ತಿಂದೊಳೆ. ಕೊತ್ತಿ ಹುದಿಕಿಂತಾ ವಾಸಿತೇಳಿ ಸುಮ್ಮನಾತ್. ನಾವೆಲ್ಲಾ ಬಾಯಿಗೆ ಕೈ ಹಾಕಿ ಕಾಂಕ್ರಿಸಿಕಂಡ್ ಉಗ್‌ದವ್ವೆ ಉಗ್‌ದವ್ವ್. ಹೊಟ್ಟೆಗೆ ಹೋದ ಮಾಸ ಹೊರಗೆ ಹೆಂಗೆ ಬಂದದೆ? ○

[ 18ನೇ ಪುಟದಿಂದ ಮುಂದುವರೆದುದು ]

ಕೆಳ್ಗ್ ಹಾಕಿತ್. ಅಣ್ಣ ಹೇಳುವ ಮಾತ್ ಸುಳ್ಳಲ್ಲತೇಳುವ ಸಂಗತಿ ಅವುಳಿಗೂ ಗೊತ್ತಾತ್. ನಮ್ಮ ಮನ್ಸ್-ಇದ್ದಂಗೇ ನಮ್ಮ ನಡವಳಿಕೆನೂ ಇದ್ದದೆ. ಒಳ್ಳ ಮನ್ಸ್ ಇದ್ದರೆ ಎಲ್ಲ ಒಳ್ಳದಾಗೇ ಕಂಡದೆ. ಅದೇ ಮನ್ಸ್‌ಲಿ ಕೇಡ್ ತುಂಬಿಕಂಡಿದ್ದರೆ ನೋಡ್ದೆಲ್ಲ ಕೆಟ್ಟದ್‌ತೇ ಆದೆ. ತಿಳುವಳಿಕೆ ಸಾಲದೆ ಹಿಂದೆ ಇಂತ ತಪ್ಪು ಎಷ್ಟೋ ನಡ್ದ್ ಹೋವುಟು. ಆದರೆ ಇನ್ನ್ ಮುಂದೆ ಇಂತದ್‌ಕ್ಕೆಲ್ಲ ಆಸ್ಪದ ಕೊಡ್ಕಾಗದ್. ಇಂದೇ ಇದ್ಕೆ ಏನಾದ್ರು ತೀರ್ಮಾನ ಮಾಡೊಕುತ ಗ್ಯಾನ ಮಾಡ್ತ್.

ಅಂದೇ ಕೆಳ್ಗ್ ಮನೆಗೆ ಹೋದ ಕಲ್ಯಾಣಿ ಅವರೊಟ್ಟಿಗೆಲ್ಲ ಖುಷೀಲಿ ಮಾತಾಡಿ, ಬೆಳ್ಗ್‌ನ ತಿಂಡಿ–ಕಾಫಿ ಎಲ್ಲ ಅಲ್ಲೇ ತೀರ್ಸಿತ್ ಅವುಕ್ಕಂತೂ ಒಂದೂ ಅರ್ಥ ಆತ್ಲೆ. ನಮ್ಮ ನೆರಳು ಕಂಡ್ರೂ ಆಗದೆ ಇದ್ದಂತ ಗೂಡೆ, ಇಂದ್ ಅವುಳಾಗಿಯೋ ಮನೆಗೆ ಬಂದ್ ಇಷ್ಟ್ ಲಾಯಿಕ ಮಾತಾಡ್ತಾ ಉಟ್ಟಲಾ ! ಏನಾತ್ ಇವುಳಿಗೆ ಎಂತಾದ್ರು ಇರ್ಲಿ, ಎಲ್ಲ ಒಳ್ಳದಾದರೆ ಸಾಕ್‌ತ ಗ್ಯಾನ ಮಾಡಿಕಂಡ್ ಅವೂ ಎಂತದೂ ಕೇಳಿಕೆ ಹೋತ್ಲೆ. ನೆರೆಕರೆವು ತೇಳ್ದ ಮ್ಯಾಲೆ ಲಾಯ್ಕಾಗಿ ಇರೊಕುತೇಳುವ ಗ್ಯಾನ ಸಾಮಾನ್ಯವಾಗಿ ಎಲ್ಲವುಕೂ ಇದ್ದದೆಲ ? ಹಂಗಾಗಿ ಕಲ್ಯಾಣಿ ಹೇಳ್ದಂಗೆ ಈ ವರ್ಷ ಎರ್ಡ್ ಮನೆವೂ ಒಟ್ಟಿಗೆ ಕೂಡಿಕಂಡ್ ಬೆಳೆಕೆಲ್ಸ ಮಾಡಿಕೆ ಒಪ್ಪಿಕಂಡೊ. ಈಗ ಯಾವುದೇ ತಂಟೆ–ತಕರಾರ್ ಇಲ್ಲದೆ ಎಲ್ಲವು ಖುಷಿಲೀ ಒಳೊ. ●

—ಚಾಂಗನ ಚಂ ಪೂವಯ್ಯ, ಮೊಣ್ಣಂಗೇರಿ.

## ನೆಂಟಸ್ಥಿಕೆ

ಅತ್ತಿ ಮರ ನೋಡಿಕೆ ಲಾಯಿಕ
ಅತ್ತಿಗೆ ತಂಗೆ ನೋಡಿಕೆ ಪೊರ್ಲ್
ಅತ್ತೆಮಗ ಅಮ್ಮಣಿ ಗೂಡೆ
ಬಾಳ ಪೊರ್ಲ್ ನೋಡಿಕೆ
ಮಾಯಿನ ಮರಲಾಯಿಕ
ಮಾಯಿನ ಹಣ್ಣ್ ಪಸಂದ್
ಮಾವನ ಮಣಿ
ಬಾಳ ಪೊರ್ಲ್ ನೋಡಿಕೆ

—ಕುಲ್ಲಚನ ಕಾರ್ಯಪ್ಪ, ಕುಂಬಳದಾಳು.

## ಓದುಗರಲ್ಲಿ ವಿನಂತಿ

ಕೊಡಗು ಸಂಗಾತಿ ಪತ್ರಿಕೆಯಲ್ಲಿ "ಕರಿಚಿನ್ನ" ಎಂಬ ಜನಪ್ರಿಯ ಧಾರಾವಾಹಿ ಸಂಚಿಕೆಯನ್ನು ಲೇಖಕರು ಕಳುಹಿಸದ ಕಾರಣ ಈ ಸಂಚಿಕೆಯಲ್ಲಿ ಪ್ರಕಟಿಸಲಾಗಲಿಲ್ಲ. ಓದುಗರು ಸಹಕರಿಸಬೇಕಾಗಿ ಪ್ರಾರ್ಥನೆ. —ಸಂಪಾದಕಿ.

## ಉದ್ಯೋಗ ಹಾಡ್

ಉದ್ಯೋಗತೇಳುದು ಎಂತದ್‌ಂತೇಳಿ
ಗೊತ್ತ್‌ಟಾ ನೀವ್‌ಗೆ ಹೇಳ್ನೆ ಕೇಳಿ
ಹುಡ್ಕುವ ಯುವಕರೇ ಹುಡ್ಕುದು ಬುಟ್ಟ್
ನಾ ಹೇಳ್ದೊರ ಕೇಳಿ ಹಣಿ ತಾಳಿ.

ಸೂಟು ಬೂಟು ಹಾಕಿ ಡಿಗ್ರಿ ಕೈಲಿ ಹಿಡ್ದ್
ಊರೂರು ಸುತ್ತಿರೆ ಸಿಕ್ಕುದುಲೆಣ್ಣ
ಸೂಟುನ ಬಿಚ್ಚಿ ಡಿಗ್ರಿನ ಮೊಡ್‌ಚಿ
ಇಳ್‌ದರೆ ನೋಡಿ ಅದ್ ಉಟ್ಟಣ್ಣ.

ಹಾದಿಲಿ ಬೀದಿಲಿ ಕುದ್ದಲ್ಲಿ ನಿತ್ತಲ್ಲಿ
ಉದ್ಯೋಗ ಉಟ್ಟ್ ಮಾಡವ್‌ಕಣ್ಣ
ಮಾಡದೆ ಇದ್ದ್ ಕುದ್ದ್‌ಕಂಡ್ ತಿಂದರೆ
ಕುಡಿಕೆ ಹಣನೂ ಸಾಲಿಕಿಲೆಣ್ಣ.

ಎಳ್ಕುದು, ಕಡಿಯುದು, ವಡಿಯುದು, ಕೆತ್ತುದು
ಎಲ್ಲಾ ಒಂದೊಂದು ಉದ್ಯೋಗ ಅಣ್ಣ
ಇಟ್ಟಿಗೆ, ಕಟ್ಟಿಗೆ, ಪೆಟ್ಟಿಗೆ, ಕೊಟ್ಟಿಗೆ
ಕಟ್ಟಿಕೆ ಕಲಿಯುಕು ನೀನಣ್ಣ.

ಉದ್ಯೋಗಂತೇಳುದು ಎಲ್ಲಿಯೂ ಇಲ್ಲೆ
ನುಗ್ಗಿದ ಕಡೆ ಕೈಗೆಟ್‌ಕದೆ ಇಲ್ಲೆ
ವಲ್ಲೆ ವಲ್ಲೆಂತೇಳಿಕಂಡಿದ್ದರೆ
ಜೀವನ ಹಾಳ್ ಮತ್ತೇನಿಲ್ಲೆ.

ದೇವುರು ಕೊಟ್ಟುಟು ಕೈಕಾಲ್ ಗಟ್ಟಿ
ಒನ್ನ್ ನೋಡಿ ನೀವ್ ಅದ್ ಮುಟ್ಟಿ
ಅದ್ ಇಲ್ಲದವ್ ಅವರ ಗುರಿಮುಟ್ಟಿ
ನಿತ್ತೊಳೊ ನಮ್ಮ ಮುಂದೆ ಎದೆತಟ್ಟಿ !!

ಉದ್ಯೋಗಂತೇಳಿರೆ ಇದೆ ನೋಡಿ
ಹಿಂದೆ ಮುಂದೆ ನೋಡದೆ ಈಗಳೆ ಮಾಡಿ
ಭಾಗ್ಯದ ಬಾಗ್‌ಲ್ ತೆಗ್‌ದದೆ ನೋಡಿ
ನಡ್‌ದದೆ ನೋಡಿ ಜೀವನ ಗಾಡಿ.

—ಪೂಜಾರಿರ ಯು. ಜಗದೀಶ್, ಬಿಳಿಗೇರಿ.

**ಕೊಡಗು ಸಂಗಾತಿ ಪತ್ರಿಕೆನ**
**ತಕಂಡ್ ಓದಿ**

# ಗೌಡ ಸಂಸ್ಕೃತಿ : ಭಾಷೆ ಮೊದ್ಲ

ಕೊಡಗ್‌ಗೆ ಗೌಡ ಹೆಂಗೆ ಬಂದ್ ನೆಲ್ಸಿದೊತ್ತೇಳ್ದ್‌ಕ್ಕೆ ಬ್ಯಾರೆ ಬ್ಯಾರೆ ತರದ ಕತೆ ಉಟ್ಟು. ವಿದ್ವಾಂಸರ್, ಸಾಹಿತಿಗ, ಒಂದೊಂದು ರೀತಿಲಿ ಕೊಡಗ್ ಚರಿತ್ರೆನ ಬರ್ದೊಟ್ಟೊ. ಇದ್ನ ನೋಡ್ರೆ ನಮಿಗೆ 500 ವರ್ಷದ ಇತಿಹಾಸ ಉಟ್ಟೊತ ಗೊತ್ತಾದೆ. ಈಗ ಈ ಪುರಾಣನ ಕಟ್ಟ್‌ಕ್ಕಂಡ್ ನಮಿಗೇನಾಕು. ಹೆಂಗೂ ನಾವೆಲ್ಲಾ ಕೊಡಗಲಿತ್ತಾನೆ ಹುಟ್ಟಿದವು. ನಾವ್ ಹಿಂದೆ ಹೆಂಗೆ ಇದ್ದೊ, ಈಗ ಹೆಂಗೆ ಒಳೊ ಮುಂದೆ ಹೆಂಗೆ ಇರಿಕ್ಕಾದೆತೇಳ್ವ ವಿಷ್ಯದ ಬಗ್ಗೆ ಸ್ವಲ್ಪ ಚಿಂತಿಸಿಕ್ಕಾದೆ ಮತ್ತೆ ನಾವು ಜೀವನ ಮಾಡ್‌ಕನ ನಮ್ಗೊಂದು ಸಂಸ್ಕೃತಿತ್ತೇಳ್ದ್ ಇದ್ದದಲ. ಆದೇ ಸಂಸ್ಕೃತಿನ ವಿಷ್ಯನೇ ನಾ ಮಾಡುವ ಭಾಷೆ ಅರೆಭಾಷೆ! ಇದ್ ನಮ್ಮ ತಾಯಿ ಭಾಷೆ! ಇದೊಂದು ಲಾಯಕ್ಕಾದ ಭಾಷೆ. ಪ್ರತಿಯೊಂದು ಜನಾಂಗ ಮುಂದುವರ್ದ್, ಸಂಸ್ಕೃತಿ ಉಳಿಯಕ್ಕುತ್ತಾದ್ರೆ ಅದ್ಕೆ ಭಾಷೆನೆ ಮೂಲ. ಭಾಷೆಯಿಲ್ಲದಿದ್ದರೆ ನಾವ್ ಏನು ಮಾಡಿಕ್ಕಾದೆ. ಪ್ರಾಣಿಗಳಂಗೆ ಇರಿಕಾದೆ ಅಷ್ಟೆ! ಅದ್ರಂದ ನಮ್ಮ ಸುಂದರ ಭಾಷೆನ ಬೆಳ್ಸಿ ಉಳ್ಸೊಣೀತಾದ್ರೆ ಏನು ಮಾಡಕು. ನಾವೆಲ್ಲವೂ ಪರಸ್ಪರ ಕಾಂಬಕನ ಅರೆಭಾಷೆಲಿ ಮಾತಾಡಕು. ಈ ಭಾಷೆನ ನಮ್ಮಲ್ಲಿ ಎಷ್ಟ್ ಮಂದಿ ಮಾತಾಡ್ವೆ. ಬಾಕಿದ್ದವು ಯಾಕೆ ನಮ್ಮ ಭಾಷೆನ ಮಾತಾಡ್ದುಲೆ. ನಮ್ಮ ಭಾಷೆ ಮಾತಾಡ್ಕನ ನಾಚಿಕೆಯಾದೆನ! ಕಷ್ಟಾದೆನ! ಇಲ್ಲೆ ಅಸಹ್ಯ ಯಾದೆನ! ಅಲಾ ಮುಜುಗರಾದೆನಾ! ಕೆಲವುರ್ಕ್ಯಾದು. ಮತ್ತೆ ನಾಕ್ ಜನ ಸೇರ್ದಲ್ಲಿ ಪಿಸ್ ಪಿಸ್‌ತ್ತೇಳಿ ಬ್ಯಾರೆ ಭಾಷೆ ಮಾತಾಡ್ದ್. ಗೊತ್ತಿಲ್ಲದವರೊಟ್ಟಿಗೆ ಪರ್ವಾಗಿಲ್ಲೆಕು. ಭಾಷೆ ಗೊತ್ತಿದ್ದವರೊಟ್ಟಿಗೆ ಲಾಯಕ್ಕ ಮಾತಾಡ್ಕೆ ಇವ್ಕೆ ಏನ್ ಕೇಡ್! ಗೌಡಾಗಿ ಹುಟ್ಟಿ ಅರೆಭಾಷೆತ್ತೇಳ್ರೆ ಅವುಕ್ಕೇನ್ ಹೇಳೊಕುತ್ತೇಳಿ ನೀವೆ ಹೇಳಿ. ಇವ್ಕೆ ಬುದ್ಧಿ ಇಲ್ಲೇತ್ತೇಳರ್ ಮತ್ತೆ ಸ್ವಾಭಿಮಾನ ಇಲ್ಲದವುಕ. ಇವ್ ಬ್ಯಾರೆ ಭಾಷೆ ಮಾತಾಡ್ತಿರ್ದು ಮರ್ರೋತೀಗುಟ್ಟು! ನಮಿಗೆ ನಮ್ಮ ಭಾಷೆ ಮೇಲೆ ಅಭಿಮಾನ ಇಲ್ಲೆ. ಆದ್ರೆ ಬ್ಯಾರೊಂದು ಭಾಷೆ ಮೇಲೆ ಎಂತ ಅಭಿಮಾನ! ಎಂತ ವಿಪರ್ಯಾಸ ಇದ್ ಭಾಷಾ ಪ್ರೇಮ. ಇಲ್ಲಿ ನಾವ್ ಹೆಂಗೆ ಕೆಲವು ಇತರ ಪ್ರಾದೇಶಿಕ ಭಾಷೆಗಳ್ನ ಕಲ್ತ್ ಮಾತಾಡ್ವೆ ಹಂಗೇನೆ ಬ್ಯಾರೆವ್‌ಕ ನಮ್ಮ ಭಾಷೆನ ಮಾತಾಡಕು. ಹಂಗ್ಯಾಕನ ನಮ್ಮ ಭಾಷೆ ಬೆಳಿಯಕ್ಕೆ ಅನುಕೂಲಾದೆ. ಈಗ ಪತ್ರಿಕೆ ನಮಿಗೆ ಬಾರಿ ಉಪಕಾರ ಮಾಡಿ, ಲೇಖನ ಬರಿಯೊದರೊಟ್ಟಿಗೆ ಎಲ್ಲಾ ಜನಾಂಗಕ್ಕೂ ನಮ್ಮ ಅರೆಭಾಷೆನ ಓದಿಕೆ ಅವಕಾಶ ಮಾಡಿಕೊಟ್ಟುಟು. ಈ ಅವಕಾಶನ ಎಲ್ಲವು ಉಪಯೋಗ್ಸಿಕಣಕು. ಇದೇ ರೀತಿ ಮುಂದುವರ್ದ್ ನಮ್ಮ ಭಾಷೆ ಅತೀ ಎತ್ತರಕ್ಕೆ ಬೆಳೆಯಕು. ಇದ್ ಕೊಡ ಜಿಲ್ಲೆಲಿ ಅಡ್‌ಭಾಷೆ ಆಕು. ಭಾಷಾ ಸಂಸ್ಕೃತಿ ಎಲ್ಲೆಡೆ ಹರಡಕು ಪ್ರತಿಯೊಬ್ಬನು ನಮ್ಮ ಭಾಷೆನ ಪ್ರೀತ್ಸಬೇಂತಾಕು. ಹಂಗೆ ಇದ್ ತನ್ನ ಕನ ಗುರ್ತಿಸಿಕಂಡ್ ಆಕಾಶವಾಣಿ, ದೂರದರ್ಶನಲಿನ ಪ್ರಸಾರಕ್ಕೆ ಕೆಲವು ಕಾರ್ಯಕ್ರಮಗಳ್ನ ನಮ್ಮ ಭಾಷೆಲಿ ನೀಡ್‌ಬೇಂತಾಕು. ಕೊಡಗ್‌ನ ಸಂಸ್ಕೃತಿಲಿ ನಮ್ಮ ಸಂಸ್ಕೃತಿ ಬೆರಿಯಕು. ಆಗ ಕೊಡಗ್‌ತೇಳ್ದ್ ವಿಶಿಷ್ಟ ಜನಾಂಗದ, ವೈವಿಧ್ಯಮಯ ಸಂಸ್ಕೃತಿ ಹೊಂದಿದ ಜಿಲ್ಲೆತೇಳ್ದ್ ದೇಶ ವಿದೇಶಕ್ಕೆ ಗೊತ್ತಾಕು. ಗೌಡ ಜನಾಂಗಕ್ಕೆ ಎಂತಹ ಶ್ರೀಮಂತ ಭಾಷೆ ಉಟ್ಟತ್ತೇಳ್ದ್ ಪ್ರತಿಯೊಬ್ಬಂಗೆ ಮನವರಿಕೆಯಾದೆ. ಇದ್ರಂದ ನಮ್ಮೊಳಗೆ ಸೌಹಾರ್ದಯುತದ ವಾತಾವರಣ ಬೆಳಿಯಕ್ಕೆ ಕಾರಣಾದೆ. ಜನ್ರಲಿ ಶಾಂತಿ ನೆಲ್ಸಿದೆ. ಪರಸ್ಪರ ಪ್ರೀತಿ ವಿಶ್ವಾಸ ತುಂಬಿದೆ. ಜಾತೀಯತೆ ತೊಲ್ಗಿದೆ. ಸಹಬಾಳ್ವೆಗೆ ನಾಂದಿಯಾದೆ. ಆಗ ಗಂಡ್ ಹೆಣ್ಣ್‌ತ್ತೇಳ್ವ ಎರಡೇ ಜಾತಿ ತೇಳ್ದ್ ನಮ್ಮ ಹೃದಯಲಿ ಬೇರೂರ್ದೆ. ಇಂತ ಭವಿಷ್ಯದ ಕನ್ಸ ನನಸ್ಸಕೆ ನಾವೆಲ್ಲಾ ಸಮಾನ ಮನಸ್ಸಿಂದ ಸ್ಥಳೀಯ ಭಾಷೆಗಳ್ನ ಕಲ್ತ್ ಪರಸ್ಪರ ಮಾತಾಡ್ಕಂಡ್ ಸರ್ವ ಭಾಷೆನ ಬೆಳ್ಸಿಕೆ ಪ್ರಾಮಾಣಿಕದ ಪ್ರಯತ್ನ ಮಾಡಕು. ಮತ್ತೆ ಭಾಷಾಭಿಮಾನ ಇಟ್ಕಣಕುತ್ತೇಳಿ ಹಾರೈಸಿನೆ. ಹಂಗೆ ನಮ್ಮ ಭಾಷೆ ಅರೆಭಾಷೆನ ಉದ್ಧಾರ ಮಾಡಿ ಒಬ್ಬಾಡಿಕಂಡ್ ಹೋರಾಡ್ತಿರುವ ಭಾಷಾಭಿಮಾನಿಗಳ್ಗೆ ನಮ್ಮ ಹೃದಯಪೂರ್ವಕ ವಂದನೆಗ.

"ಅರೆಭಾಷೆ ಸರ್ವಭಾಷೆಯಾಗಲಿ"

—ಗುಡ್ಡೆಮನೆ ರಮೇಶ್, ಮಡಿಕೇರಿ.

## ಪ್ರೀತಿಯ ಕಣ್ಮಣಿಗಳಾದ ದೀಪಿಕಾ ಮತ್ತೆ ಮೋನಿಷ್



ಇವು ಪೂಜಾರಿರ ಕುಶಾಲಪ್ಪ ಮತ್ತೆ ಪಾರ್ವತಿ ದಂಪತಿಗಳ ಮಕ್ಕ

18-3-91 ದೀಪಿಕಾ ಕುಶಾಲಪ್ಪ

18-3-92 ಮೋನಿಷ್ ಕುಶಾಲಪ್ಪ

ಆರೋಗ್ಯ, ಸುಖ, ಸಂತೋಷಂದ ಯಾಗೋಳು
ನಗುನಗುತ್ತಾ ಇರೋಕು.
ನಿನ್ನು 9 ನೇ ಮತ್ತೆ 8ನೇ ಹುಟ್ಟು ಹಬ್ಬಕ್ಕೆ ಆಶೀರ್ವಾದ ಮಾಡುವ

ಅಜ್ಜಿ : ಪೂಜಾರಿರ ಬೆಳ್ಯವ್ವ ಅಪ್ಪ : ಪೂಜಾರಿರ ಕುಶಾಲಪ್ಪ ಅವ್ವ : ಪಾರ್ವತಿ ಕುಶಾಲಪ್ಪ, ಮಡಿಕೇರಿ

---

## 3ನೇ ವರ್ಷದ ಚಿರಸ್ಮರಣೆ



ಜನನ : : 10-11-1990

ಮರಣ : : 15-3-1997

ನೀನು ನಮ್ಮನ್ನಗಲಿ 3 ವರ್ಷ ಸಂದರೂ ನಿನ್ನ ನೆನಪು ಇಂದಿಗೂ
ನಮ್ಮ ಮನಸ್ಸಿನಲ್ಲಿ ಹಚ್ಚ ಹಸಿರಾಗಿಯೇ ಉಳಿದಿದೆ. ನಿನ್ನ ಆತ್ಮಕ್ಕೆ
ಭಗವಂತನು ಸದಾ ಶಾಂತಿಯನ್ನು ನೀಡಲಿ ಎಂದು ಆಶಿಸುವ,

ತೆಕ್ಕಡೆ ಎಲ್. ದರ್ಶನ್

ತಂದೆ : ತೆಕ್ಕಡೆ ಎಂ. ಲಕ್ಷ್ಮಣ ತಾಯಿ : ಶಾಂತಿ ಲಕ್ಷ್ಮಣ
ಮತ್ತು ಅಣ್ಣ, ತಂಗಿ ಹಾಗೂ ನೆಂಟರಿಷ್ಟರು, ಗೋಣಿಕೊಪ್ಪಲು

---

## ವಿದೇಶ ಪ್ರಯಾಣ



ಗುಡ್ಡೆಮನೆ ಕೆ. ವಿಜಯಾನಂದ [ವಿಜು], M.Sc.
[Ph. D. in Microbiology]
S/o ಗುಡ್ಡೆಮನೆ ಕುಮಾರಪ್ಪ ಮತ್ತು
ಶ್ರೀಮತಿ ಸುಶೀಲಾ ಕುಮಾರಪ್ಪನವರ ಪುತ್ರ.

ಇದೇ ಮಾರ್ಚ್ 8 ರಂದು ದಕ್ಷಿಣ ಆಫ್ರಿಕಾದ ದರ್ಬನ್‌ಗೆ
ಹೆಚ್ಚಿನ ವ್ಯಾಸಂಗಕ್ಕಾಗಿ ತೆರಳಿದ ಶ್ರೀ ಗುಡ್ಡೆಮನೆ ಕೆ. ವಿಜಯಾನಂದ [ವಿಜು]ನಿಗೆ
ನಮ್ಮೆಲ್ಲರ ಶುಭ ಹಾರೈಕೆಗಳು. ಈ ಶುಭ ಗಳಿಗೆಯಲ್ಲಿ ಕುಲಗುರು
ಶ್ರೀ ವೆಂಕಟರಮಣನು ಹೆಚ್ಚಿನ ಶ್ರೇಯಸ್ಸನ್ನು ಕರುಣಿಸಲಿ ಎಂದು ಹಾರೈಸುವ,

ಶ್ರೀ ಪಟ್ಟಡ ಪ್ರಭಾಕರ ಶ್ರೀಮತಿ ಪಟ್ಟಡ ಶೀಲಾಮಣಿ
ಕುಮಾರ ಪಟ್ಟಡ ದೀಪಕ್ ಕುಮಾರಿ ಪಟ್ಟಡ ನೀಶಾ

Printed by M.K. Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore - 12. Published at Mysore, Editor PATTADA P. SHEELAMANI, No: 35, 1st Cross, 4th Block ( Near Divisional Telephone Office), Jayalakshmipuram, Mysore - 570 012 ✆ 516771